# "ಪ್ರತೀಕಾರ"

ಎಂಬ

## ಐದಂಕದ ನಾಟಕ

ಬರೆಹಗಾರರ:

ಬಿ. ಭುಜಂಗರಾವ್, ಬಿ. ಎ., ವಿದ್ವಾನ್.

(Lecturer, St. Aloysius' College, Mangalore)

1937

ಪ್ರಕಾಶಕರು:

ಯು. ಆರ್. ಶೆಣ್ಯೈ ಎಂಡ್ ಸನ್ಸ್

ರಥಬೀದಿ, ಮಂಗಳೂರು, ದ. ಕ.

# ಪ್ರತೀಕಾರ

## ಪ್ರಸ್ತಾವನೆ

ಮಹಾರಾಷ್ಟ್ರಪ್ರಾಂತ್ಯದ ಜನರಲ್ಲಿ ಜಾಗೃತಿಯನ್ನುಂಟುಮಾಡಿ ಅವರ ಸ್ವದೇಶಾಭಿಮಾನ್ನು ಹೆಚ್ಚಿಸಿ ಮಹಮ್ಮದೀಯರ ದಾಸ್ಯದಿಂದ ಅವರನ್ನು ಉದ್ಧರಿಸಿದವನು ಶಿವಾಜಿಮಹಾರಾಜನು. ಅವನು ಸ್ವರಾಜ್ಯ ಸ್ಥಾಪನೆಯ ಮಹಾಕಾರ್ಯದಲ್ಲಿ ತನಗೆ ನೆರವಾಗಬೇಕೆಂದು ಪೂನೆಯ ಸುತ್ತಲಿನ ನಾಯಕರಿಗೆ ಬೋಧಿಸಿ ಅವರನ್ನು ತನ್ನ ಕಡೆಗೆ ಒಲಿಸಿ ಕೊಂಡು, ವಿಜಾಪುರದ ಸುಲ್ತಾನನನ್ನೇ ಅಲ್ಲ, ಏಕಚ್ಛತ್ರಾಧಿಪತಿಯಾದ ದಿಲ್ಲೀಶ್ವರ ಔರಂಗಜೇಬನನ್ನೇ ಮಂಕುಗೊಳಿಸಿದ ವಿಭೂತಿಪುರುಷನು. ಅವನು ಮೋಸದಿಂದಲೂ ಕುಹಕೋಪಾಯದಿಂದಲೂ ಮಹಮ್ಮದೀ ಯರನ್ನು ವಂಚಿಸಿ ತನ್ನ ರಾಜ್ಯವನ್ನು ಸ್ಥಾಪಿಸಿದನೆಂದು ಹೇಳಿ, ಅವ ನನ್ನು ಹಳಿವವರಿದ್ದಾರೆ. ಹಾಗೆಯೇ, ಅವನು ದೇವಾಂಶಸಂಭೂತನು, ಧರ್ಮೋದ್ಧಾರಕ್ಕೋಸ್ಕರ ಅವತರಿಸಿದನು, ಅದ್ಭುತ ಕೃತ್ಯಗಳನ್ನೆಸಗಿ ಹಿಂದುಗಳನ್ನು ಎಚ್ಚರಿಸಿದನು ಎಂದು ಹೇಳಿ ಅವನನ್ನು ಹೊಗಳುವ ವರೂ ಇದ್ದಾರೆ.

ಶಿವಾಜಿ ಪ್ರಾಬಲ್ಯಕ್ಕೆ ಬಂದ ಕಾಲದಲ್ಲಿ ಮಹಾರಾಷ್ಟ್ರದ ನಾಯಕ ರಲ್ಲಿ ಮೋರೆವಂಶದ ಚಂದ್ರರಾಯನೆಂಬವನು ಬಹಳ ಸಾಹಸಿಯೂ ಸ್ವಾವಲಂಬಿಯೂ ಆಗಿದ್ದನು. ಅವನು ಶಿವಾಜಿಯನ್ನು ತಿರಸ್ಕರಿಸಿ ಮಹಮ್ಮದೀಯರ ಸಹಾಯಕನಾಗಿದ್ದುದರಿಂದ, ಅವನನ್ನು ಶಿವಾಜಿ ಮೋಸದಿಂದ ಕೊಲ್ಲಿಸಿ ಅವನ ರಾಜ್ಯವನ್ನು ಸ್ವಾಧೀನಪಡಿಸಿಕೊಂಡ ನೆಂದು ಕೆಲವು ಚರಿತ್ರಕಾರರ ಮತ. ಚಂದ್ರರಾಯನು ಆಕಸ್ಮಿಕ ಮರಣಕ್ಕೆ ತುತ್ತಾದಾಗ ಅವನ ಅನುಚರರಲ್ಲಿ ಕೆಲವರು ತಮ್ಮ ಉತ್ಕರ್ಷ ಸಾಧನೆಗೆಂದು ಶಿವಾಜಿಯೇ ಅವನನ್ನು ಕೊಲ್ಲಿಸಿದನೆಂಬ ಅಪವಾದ ವನ್ನು ಹುಟ್ಟಿಸಿದರೆಂದು ಇನ್ನು ಕೆಲವರ ಹೇಳಿಕೆ. ಹೀಗೆ ಚಂದ್ರ ರಾಯನ ಮರಣದ ವಿಚಾರವಾಗಿ ಭಿನ್ನಾಭಿಪ್ರಾಯಗಳಿದ್ದರೂ ಅವನ

ಮರಣದ ಅನಂತರ ಜಾವಳಿಯ ಪ್ರಾಂತ್ಯವು ಶಿವಾಜಿಯ ವಶವಾಯಿ ತೆಂಬುದು ನಿರ್ವಿವಾದವಾದುದು.

ಈ ವಿಷಯಗಳೊಡನೆ ಚಂದ್ರರಾಯನ ಮಗಳಾದ ತಾರೆಯ ಪ್ರಣಯಪ್ರಸಂಗವನ್ನು ಸೇರಿಸಿಕೊಂಡು ಈ ನಾಟಕವು ಬರೆಯಲ್ಪಟ್ಟಿದೆ. ಇದಕ್ಕೆ 'ಪ್ರತೀಕಾರ'ವೆಂಬ ಹೆಸರು ಎಷ್ಟರಮಟ್ಟಿಗೆ ಸಾಧುವೆಂಬುದನ್ನು ನಾನರಿಯೆನು.

ನಾಟಕಗ್ರಂಥದಲ್ಲಿ ಆಯಾ ವ್ಯಕ್ತಿಗಳ ಸ್ವಭಾವೋಚಿತವಾದ ಭಾಷೆಯಿರಬೇಡವೇ, ನೀಚಪಾತ್ರಗಳು ಗ್ರಾಮ್ಯಭಾಷೆಯನ್ನಾಡದೆ ಸರಳವಾದ ಭಾಷೆಯನ್ನಾಡುವುದು ದೋಷವಲ್ಲವೇ, ಎಂಬ ಸಂದೇಹವು ಈ ಗ್ರಂಥವನ್ನು ಓದುವಾಗ ಉಂಟಾಗಬಹುದು. ಇದರಲ್ಲಿ ಬರುವ ಪಾತ್ರಗಳ, 'ಉಚ್ಚ, ಮಧ್ಯಮ, ನೀಚ' ಎಂಬ ಸ್ಥಿತಿಗಳಿಗನುಸಾರವಾಗಿ ಅವರ ಜೀವನಧ್ಯೇಯಗಳಲ್ಲಿ, ಅಭಿಪ್ರಾಯಗಳಲ್ಲಿ, ಮಾತುಗಳಲ್ಲಿ ವ್ಯತ್ಯಾಸವಿದೆ. ಮಾತನಾಡುವಾಗ ಸ್ವಾಭಾವಿಕವಾದ ಸ್ವರಭಾರದಿಂದ, ಸ್ವರದ ಏರಿಳಿತಗಳಿಂದ ಗೊತ್ತಾಗಬಹುದಾದ ವಿಷಯಗಳನ್ನು ಸಂಭಾಷಣೆಯ ಮಾತುಗಳ ಬರೆವಣಿಗೆಯಲ್ಲಿ ತೋರಿಸಿಕೊಡಲಿಕ್ಕಾಗದು. ಆ ಮಾತುಗಳ ಮರ್ಮವನ್ನು ತಿಳಿದು ಅವನ್ನು ಗಟ್ಟಿಯಾಗಿ ಓದಿದರೆಯೇ ಆ ವಿಷಯಗಳನ್ನು ತಿಳಿಯಲು ಸಾಧ್ಯ. ಆದರೆ, ಅಂತಹ ವ್ಯತ್ಯಾಸಗಳನ್ನು ತಿಳಿಸಲಿಕ್ಕೆಂದು ಶಬ್ದಸ್ವರೂಪವನ್ನು ಕೆಡಿಸಿ ಇಲ್ಲದ 'ಇಳಿಯೊತ್ತು'ಗಳನ್ನು ಬರೆವ, 'ಗ್ರಾಮ್ಯ'ಭಾಷೆಯೆಂದು ಶಬ್ದಗಳನ್ನು ಮನಸ್ವಿತೆಯಿಂದ ಪ್ರಯೋಗಿಸಿ ರೂಪಾಂತರಗೊಳಿಸಿ ಬರೆವ, ಪದ್ಧತಿಯೊಂದು ರೂಢವಾಗಿದೆ. ಮುದ್ರಿತವಾದ ಅಂತಹ ಕೆಲವು ಗ್ರಂಥಗಳನ್ನು ಓದಿನೋಡಿ, ಆ ತೆರದ ಬರೆವಣಿಗೆಯಿಂದ ಸಾಹಿತ್ಯಾಭಿವೃದ್ಧಿಗಾಗಲಿ, ವಿಷಯಗ್ರಹಣಕ್ಕಾಗಲಿ ಪ್ರಯೋಜನವಿಲ್ಲವೆಂದು ನನಗೆ ತೋರಿತು. ದಕ್ಷಿಣ ಕನ್ನಡ ಜಿಲ್ಲೆಯ ಕನ್ನಡದ ಗ್ರಾಮ್ಯರೂಪಗಳು ಈಗ 'ಗ್ರಾಮ್ಯ'ವೆಂದು ಮುದ್ರಿತವಾಗುವ ಭಾಷೆಯಷ್ಟು ವಿಕೃತವಾಗಿಲ್ಲವೆಂದೇ ನನ್ನ ಭಾವನೆ. ಕನ್ನಡವೇ ಮನೆಮಾತಾಗಿರುವವರು ಅಲ್ಲಲ್ಲಿ ಸ್ವರ, ವರ್ಣ, ಪ್ರತ್ಯಯಗಳನ್ನು ಲೋಪಗೊಳಿಸಿದರೂ

ವ್ಯಾಕರಣಬದ್ಧವಾದ ಭಾಷೆಯನ್ನು ಆಡುತ್ತಾರೆಂದೂ, ಅವರವರ .ಮಾತಿನ ಗತಿಯಿಂದಾಗಿ, ಸ್ವರಭೇದದಿಂದಾಗಿ ಅವುಗಳಲ್ಲಿ ಬಹಳ ವ್ಯತ್ಯಾಸವಿದ್ದಂತೆ ನಮಗೆ ಭಾಸವಾಗುತ್ತದೆಂದೂ ನನ್ನ ಎಣಿಕೆ. ಇನ್ನು ಕೆಲವರು ಆಡುವ ಕನ್ನಡ ಭಾಷೆಯಲ್ಲಿ ಅನ್ಯಭಾಷೆಗಳ ಸಂಪರ್ಕವಿದೆ. ಹೇಗಿದ್ದರೂ ಗ್ರಾಮ್ಯಭಾಷೆಗೆ ಒಂದು ಪ್ರಮಾಣವಿಲ್ಲ. ಹೀಗಿರುತ್ತಾ ನೀಚಪಾತ್ರಗಳ ಮಾತನ್ನು ಹೇಗಾದರೂ ಬರೆದು ಅದನ್ನು ಗ್ರಾಮ್ಯ ವೆಂದು ಸಾಧಿಸುವ ಹವ್ಯಾಸವೇಕೆ, ಸರಳರೀತಿಯಲ್ಲಿಯೇ ಬರೆದು ಓದುವವರು ಬೇಕಾದಂತೆ ಓದಿಕೊಳ್ಳಲಿ ಎಂದು ಬಿಡುವುದು ಮೇಲ ಲ್ಲವೇ, ಎಂದು ನನಗೆ ಹೊಳೆಯಿತು. ಆದುದರಿಂದ ಈ ಕ್ರಮವನ್ನು ತುಲನಾತ್ಮಕ ದೃಷ್ಟಿಯಿಂದ ಪರಿಶೀಲಿಸಿ ಇದರ ಗುಣಾವಗುಣಗಳನ್ನು ಸಹೃದಯರಾದ ವಾಚಕರೇ ನಿಶ್ಚಯಿಸಲಿ.

ಇದರ ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಓದಿ, ಅದರಲ್ಲಿದ್ದ ದೋಷಗಳನ್ನು ತೋರಿಸಿ, ಅವನ್ನು ಸರಿಪಡಿಸುವುದಕ್ಕೆ ಯೋಗ್ಯಸಲಹೆ ಗಳನ್ನಿತ್ತು, ಇದನ್ನು ಪ್ರಕಟಿಸುವುದಕ್ಕೆ ಪ್ರೋತ್ಸಾಹಿಸಿ, ಅದಕ್ಕೆ ಬೇಕಾದ ಅನುಕೂಲತೆಗಳನ್ನು ಕಲ್ಪಿಸಿ, 'ಕರಡಚ್ಚು'ಗಳನ್ನು ತಿದ್ದಿ, ಇದರ ಪ್ರಕ ಟನ ಕಾರ್ಯದಲ್ಲಿ ನೆರವಾದ ನನ್ನ ಸಹಾಧ್ಯಾಪಕರೂ ಮಿತ್ರರೂ ಆದ, ಶ್ರೀಯುತ ವಿದ್ವಾನ್ ಸೇಡಿಯಾಪು ಕೃಷ್ಣಭಟ್ಟರಿಗೆ ನಾನು ಚಿರಋಣಿ ಯಾಗಿರುವೆನು.

ಇದನ್ನು ಪ್ರಕಾಶಪಡಿಸುವ ಸಕಲ ಭಾರವನ್ನೂ ವಹಿಸಿದ 'ಯು. ಆರ್. ಶೆಣೈ, ಎಂಡ್ ಸನ್ಸ್' ಇದರ ಯಜಮಾನರಾದ ಶ್ರೀಯುತ ಯು. ಆರ್. ಶೆಣೈಯವರಿಗೂ, ಇದನ್ನು ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ 'ಶಾರದಾ ಪ್ರೆಸ್ಸಿ'ನವರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳು.

ಇತಿ,

ಮಂಗಳೂರು,
ತಾ. 25-12-1937.

**ಬಿ. ಭುಜಂಗರಾವ್.**

# ಪಾತ್ರಗಳು

**ಖಂಡೋಜಿನಾಯಕ:** ಚಂದ್ರರಾಯ ಮೋರೆಯ ಸೋದರಳಿಯನು; ತಾರೆಯನ್ನು ಪ್ರೀತಿಸುವವನು.

**ರಘುನಾಥರಾಯ:** ಚಂದ್ರರಾಯನ ತಮ್ಮನು.

**ನೇತಾಜಿನಾಯಕ:** ಶಿವಾಜಿ ಮಹಾರಾಜನ ಸರದಾರರಲ್ಲೊಬ್ಬನು; ತಾರೆಯ ಮನಸ್ಸನ್ನಪಹರಿಸಿದವನು.

**ಸುಗುಣನಾಯಕ:** ಶಿವಾಜಿ ಮಹಾರಾಜನ ಆಪ್ತಸ್ನೇಹಿತನು; ನೇತಾಜಿಯ ಭಾವನಂಟನು.

**ಮಾರೋಜಿ:** ನೇತಾಜಿನಾಯಕನ ಸ್ವಾಮಿನಿಷ್ಠ ಸೇವಕನು.

**ಸಾವಳ್ಯ:** ಖಂಡೋಜಿಯ ಸೇವಕನು.

**ಕೃಷ್ಣಾಜಿಶಾಸ್ತ್ರಿ:** ಜಾವಳಿಯ ಬ್ರಾಹ್ಮಣನು (ಶಿವಾಜಿ ಮಹಾರಾಜನ ಪಕ್ಷಪಾತಿ).

**ಗೋಪೀನಾಥ ಪಂತ:** ಜಾವಳಿಯ ಬ್ರಾಹ್ಮಣನು (ಚಂದ್ರರಾಯನ ಪಕ್ಷಪಾತಿ).

**ತಾರೆ:** ಚಂದ್ರರಾಯನ ಮಗಳು.

**ಹೈಮವತಿ:** ನೇತಾಜಿನಾಯಕನ ಅಕ್ಕ — ಸುಗುಣನಾಯಕನ ಹೆಂಡತಿ.

**ಸಖು:** ತಾರೆಯ ಸಖಿ (ಮಾರೋಜಿಯ ಹೆಂಡತಿ).

(ಹಳ್ಳಿಯವರು; ಸೇವಕರು; ಸೈನಿಕರು).

---

**ಸ್ಥಳ:** ವಿಶಾಲಗಡ (ಜಾವಳಿಯ ಮುಖ್ಯಪಟ್ಟಣ).— ಜಾವಳಿಯ ಅರಣ್ಯ. — ಪುರಂದರಗಡ.

**ಕಾಲ:** ಸುಮಾರು ಎಂಟು ತಿಂಗಳು.

# ಅಂಕ ೧

## ದೃಶ್ಯ ೧

(ವಿಶಾಲಗಡದ ಬೀದಿ. ಕೃಷ್ಣಾಜಿಶಾಸ್ತ್ರಿ ಮತ್ತು
ಗೋಪೀನಾಥ ಪಂತರು ಮಾತನಾಡುತ್ತಾ ಬರುತ್ತಾರೆ.)

**ಕೃ:**—ಪಂತರೇ! ಎಂತಹ ವಿಪರೀತವಿದು? ನಿಮ್ಮ ಚಂದ್ರರಾಯರು ಶಿವಾಜಿ ಮಹಾರಾಜರಿಗೂ ಮೋಸಮಾಡಿದರಂತೆ.

**ಗೋ:**—ಯಾರಿಗೆ?–ಶಿವಾಜಿಗೆ?–ಏನಪ್ಪ ಆ ಮೋಸ?

**ಕೃ:**—ಮಹಾರಾಜರು ರುದ್ರಮಂಡಲದ ಕೋಟೆಯನ್ನು ಆಕ್ರಮಿಸುವ ದಿವಸವನ್ನು ಅಲ್ಲಿಯ ಖಾನನಿಗೆ ಮೊದಲೆ ತಿಳಿಸಿದುದು.

**ಗೋ:**—ಹೋ! ಹೋ! ಇದೆಯೋ ದೊಡ್ಡ ಮೋಸ—

**ಕೃ:**—ಇದೇನು ಅಲ್ಪಕಾರ್ಯವಲ್ಲ–ಅಲ್ಪರದು.

**ಗೋ:**—ಬಾಯಿಹಾರಿಸಬೇಡಿ. ಶಾಸ್ತ್ರಿಗಳೇ–ಆ ಖಾನನು ಬಹಳ ಮುಂಜಾಗ್ರತೆಯವನು. ನಿಮ್ಮ ಶಿವಾಜಿಯು ಕಡೆಯವರು ರಾತ್ರಿಯಲ್ಲಿ ಕಳ್ಳರಂತೆ ಫಕ್ಕನೆ ಮೇಲೆ ಬೀಳುತ್ತಾರೆಂದು ಎಲ್ಲರೂ ಬಲ್ಲರಲ್ಲವೆ! ಅವನು ತನ್ನ ಸೈನಿಕರನ್ನು ಅನಿರೀಕ್ಷಿತವಾದ ಕಾಳಗಕ್ಕೂ ಸಿದ್ಧವಿರುವಂತೆ ಅಪ್ಪಣೆಮಾಡಿರಬಹುದು.

**ಕೃ:**—ಏನು ಮಾತು? ಪ್ರತಿರಾತ್ರಿಯೂ ಎಲ್ಲ ಸೈನಿಕರೂ ಸಿದ್ಧರಿರುವುದು ಸಾಧ್ಯವೇ? ಮಹಾರಾಜರ ಪಂಗಡದವರು ಗುಪ್ತಮಾರ್ಗದಿಂದ ಕೋಟೆಯನ್ನು ಸಮೀಪಿಸಿದುದೇ ತಡ; ಬಾಣಗಳೂ ಗುಂಡುಗಳೂ ಮಾವಳಿಗಳನ್ನು ನೆಲಕ್ಕುರುಳಿಸಿದುವಂತೆ.

**ಗೋ:**—ಅಥವಾ–ಖಾನನ ಗುಪ್ತಚರರು ಶಿವಾಜಿಯು ಆಶಯವನ್ನು ತಿಳಿದು ತಮ್ಮೊಡೆಯನಿಗೆ ತಿಳಿಸಿರಬಹುದು—

**ಕೃ:**—ತಮ್ಮಾಲೋಚನೆಯನ್ನು ಮಹಾರಾಜರು ತಮ್ಮ ಆಪ್ತಮಿತ್ರರಿಗೆ ವಿನಾ ಬೇರೆಯಾರಿಗೂ ತಿಳಿಸುವುದಿಲ್ಲವೆಂಬುದನ್ನು ನೀವರಿಯಿರಿ.

ಬೇರೆಯುವರ ಮಾತಿರಲಿ. ಪಾಪ! ಸೈನಿಕರಿಗೂ ಹೊತ್ತುಕಂತುವ ವರೆಗೆ ಇಂತಹ ಕಡೆಗೆ ದಾಳಿಯಿಡಬೇಕೆಂಬುದು ತಿಳಿವುದಿಲ್ಲ.– ಆ ಖಾನನ ಗುಪ್ತಚರರಿಗೆ ಮಹಾರಾಜರ ಆಲೋಚನೆ ಗೊತ್ತಾದುದು ಹೇಗೆ ಸ್ವಾಮಿ? ಆಪ್ತಮಿತ್ರನಂತಿದ್ದ ಯಾರೋ ಒಬ್ಬನಿಂದಲೇ ಈ ಗುಟ್ಟುರಟ್ಟಾಗಿದೆಯೆಂಬುದು ಸ್ಪಷ್ಟವಲ್ಲವೇ?

**ಗೋ:**—ಆಗಲಿ! ನಮ್ಮ ರಾಯರ ಮೇಲೆ ಸಂಶಯವೇಕೋ?

**ಕೃ:**—ಸೆರೆಬಿದ್ದ ಖಾನನೇ ಹೇಳಿದನಂತೆ.

**ಗೋ:**—ಏನೆಂದು? ಚಂದ್ರರಾಯರು ದ್ರೋಹಿಯೆಂದೇ?

**ಕೃ:**—ಹಾಂ! ಸ್ಪಷ್ಟವಾಗಿಯಲ್ಲ.

**ಗೋ:**—(ನಕ್ಕು)–ಇಷ್ಟೆಯೋ?–ಇದು ಭೇದೋಪಾಯ ಶಾಸ್ತ್ರಿಗಳೇ–ಭೇದೋಪಾಯ!

**ಕೃ:**—ಖಾನನ ಮಾತು ಬೇರೆಯುವರಿಂದ ಸಮರ್ಥಿಸಲ್ಪಡದಿದ್ದರೆ ನಿಮ್ಮ ಮಾತನ್ನೊಪ್ಪುತ್ತಿದ್ದೆ. ಆದರೆ . . .

**ಗೋ:**—ಅವನು ಬಲೆಯನ್ನೆಷ್ಟು ದೂರ ಬೀಸಿದ್ದಾನೊ? ಯಾರು ಬಲ್ಲ?

**ಕೃ:**—ಏನು ಸ್ವಾಮಿ! ಚಾತುರ್ಯವೆಲ್ಲ ಖಾನನ ಪಾಲಿಗೆ. ಬೇರೆಲ್ಲರೂ ಹೆಡ್ಡರು, ವಿಚಾರವಿಲ್ಲದವರು, ಅಲ್ಲವೇ?

**ಗೋ:**—ಸಿಟ್ಟಾಗಬೇಡಿ ಶಾಸ್ತ್ರಿಗಳೇ! ಶತ್ರುಪಕ್ಷದವನ ಮಾತನ್ನು ಕೂಡಲೆ ನಂಬಬಾರದೆಂದೆ.

**ಕೃ:**—ನಿಮಗೆಲ್ಲ ವಿಷಯಗಳು ತಿಳಿದಿಲ್ಲ.

**ಗೋ:**—ನೀವೆಲ್ಲವನ್ನು ಕಣ್ಣಾರೆ ಕಂಡವರಲ್ಲವಷ್ಟೆ!

**ಕೃ:**—ಕಂಡವರಿಂದ ಕಿವಿಯಾರೆ ಕೇಳಿದ್ದೇನೆ–ಪಂತರೇ! ಕಿವಿಯಾರೆ!

**ಗೋ:**—ಕಂಡವರಿಂದ ಕೇಳುವವರಿಗೆ ಬರುವ ಮಾತಿನಲ್ಲಿ ಇಲಿ ಹೋಗಿ ಹುಲಿಯಾಗುತ್ತದೆ–ಶಾಸ್ತ್ರಿಗಳೇ!

(ಮಾರೋಜಿ ಪ್ರವೇಶಿಸುತ್ತಾನೆ)

**ಕೃ:**—ಇಲಿಯೋ, ಹುಲಿಯೋ?–ಮೋಸವೋ, ದಗೆಯೋ? ನೀವೇ ವಿಚಾರಿಸಿ, ನೋಡುವ. ನಮ್ಮ ಮಾರೋಜಿ ಬಂದನು. ಅವನು ನಿನ್ನೆಯೋ ಏನೊ ಬಂದುದು, ಯುದ್ಧರಂಗದಿಂದ.

(ಮಾರೋಜಿ ಬ್ರಾಹ್ಮಣರನ್ನು ನಮಸ್ಕರಿಸುತ್ತಾನೆ.)

**ಕೃ:**—ಏಳು; ಏಳು; ಮಾರೋಜಿ; ಕ್ಷೇಮವೇ?

**ಗೋ:**—ದೀರ್ಘಾಯುಷ್ಮಂತನಾಗು. ಸ್ವಾಮಿನಿಷ್ಠನಾಗಿ ಬಾಳಪ್ಪಾ!

**ಕೃ:**—ಏನು ಮಾರೋಜಿ?—ವಿಶೇಷವೇನು?

**ಮಾ:**—ಅಯ್ಯೋ! ನಾನೇನು ಬಲ್ಲೆ ಸ್ವಾಮಿ?—ನಾನು ನಿನ್ನೆ ಬಂದೆನಷ್ಟೆ!

**ಗೋ:**—ಅಲ್ಲೇನು ವಿಶೇಷವೆಂದೇ ನಮ್ಮ ಪ್ರಶ್ನೆ!

(ಮಾರೋಜಿ ಆಲೋಚಿಸುತ್ತಾನೆ.)

**ಕೃ:**—ಏನೋ ಎಲ್ಲ ವಿಚಿತ್ರವರ್ತಮಾನಗಳು—ಅವುಗಳ ವಿಷಯ.

**ಮಾ:**—ಹೂಂ! ವಿಚಿತ್ರವೆ! ಮತ್ತೇನು?—ವಿಚಾರಣೆಯಾಗುವಾಗ ನಾನು ಅಲ್ಲಿ ಇರದಿರುತ್ತಿದ್ದರೆ ಅದನ್ನು ನಾನು ನಂಬುತ್ತಿರಲಿಲ್ಲ.

**ಕೃ:**—ಹೇಗೆ, ಪಂತರೇ! ಈಗಾದರೂ ನನ್ನನ್ನು ನಂಬಬಹುದಷ್ಟೆ?

**ಗೋ:**—ಛೇ, ಛೇ! ನಿಮ್ಮನ್ನು ನಂಬುವುದಿಲ್ಲವೆಂದವರಾರು?—ಅದಿರಲಿ—ಏನಪ್ಪ ಮಾರೋಜಿ? ಚಂದ್ರರಾಯರ ಮೇಲೆ ಅಪವಾದವೆ?

**ಮಾ:**—ರಾಯರ ಕೆಲಸದಿಂದ ಕೋಟೆಯನ್ನು ವಶಮಾಡಿಕೊಳ್ಳುವುದು ಬಹಳ ಕಷ್ಟವಾಯಿತು, ಸ್ವಾಮಿ!

**ಗೋ:**—ಏ, ಮೂರ್ಖ! ರಾಯರೇ ಮೋಸಮಾಡಿದರೆಂದು ಹೇಗೆ ಗೊತ್ತೊ?

**ಮಾ:**—ನಮ್ಮ ಸೇನೆ ಕೋಟೆಯ ಕಡೆಗೆ ಹೋಗುವಾಗ ರಾಯರಿರಲಿಲ್ಲ. ನೇತಾಜಿನಾಯಕರೇ ನಮ್ಮ ಮುಂದಾಳಾಗಿದ್ದರು. ಮಹಾರಾಜರ ಸೈನಿಕರು ಕೋಟೆಯ ಗೋಡೆಯನ್ನೇರುತ್ತಿದ್ದಾಗ ರಾಯರು ಬಂದು ನಾವು ಹಿಂದಿರುಗಬೇಕೆಂದು ಅಪ್ಪಣೆಮಾಡಿದರು. ಆದರೆ . . .

**ಗೋ:**—ಓಹೋ! ಯುದ್ಧಾರಂಭದಲ್ಲಿಯೇ ಓಡಿಬಂದ ಪರಾಕ್ರಮಿಗಳೋ ನೀವು!

**ಮಾ:**—ಇಲ್ಲ ಸ್ವಾಮಿ, ಇಲ್ಲ! ಹಿಂದೋಡಲಿಲ್ಲ. ನೇತಾಜಿನಾಯಕರು ನಮ್ಮನ್ನು ಹುರಿದುಂಬಿಸಿದರು.—ಕತ್ತಿಯನ್ನೆತ್ತಿದ ಮೇಲೆ ಹಿಂದೋಡುವ ಮರಾಟಿಗನಿಲ್ಲ, ಸ್ವಾಮಿ!

**ಗೋ:**— ಹೂ! ಆಮೇಲೆ —

**ಮಾ:**— ಬಹು ಸುಲಭವಾಗಿ ಕೋಟೆಯನ್ನು ಹಿಡಿಯಬಹುದಿತ್ತು— ಆದರೆ ಶತ್ರುಗಳ ಸೇನೆ ಸಿದ್ಧವಾಗಿದ್ದುದರಿಂದ ಅನೇಕ ಜನರನ್ನು ಬಲಿಗೊಟ್ಟನಸುಗೆಂಪಾಗುವಾಗ ಕೋಟೆ ಹೇಗೂ ವಶವಾಯಿತು.

**ಗೋ:**— ನಮ್ಮ ರಾಯರದೇನು ತಪ್ಪು? ಅವರು ದಯಾಳು. ತಮ್ಮ ಸೈನಿಕರನ್ನೇಕೆ ಅನಾವಶ್ಯಕವಾಗಿ ಬಲಿಗೊಡಬೇಕೆಂದು ಸೇನೆಯನ್ನು ಕರೆದಿರಬಹುದು.

**ಕೃ:**— ಕೇಳಿ, ಸ್ವಾಮೀ! ಮುಂದಿನ ವಿಷಯವನ್ನು ಕೇಳಿ; ಆಮೇಲೆ ನಿಮ್ಮ ಟೀಕೆ!

**ಮಾ:**— ಮರುದಿನ, ಮಹಾರಾಜರು ಸೆರೆಯಲ್ಲಿದ್ದ ಖಾನನನ್ನು ಸಭೆಗೆ ಕರೆಯಿಸಿ ಶಿಕ್ಷಿಸದೆ ಗೌರವಿಸಿದರು. ಅವರ ಉದಾರತೆಗೆ ಬೆರಗಾದ ಖಾನನು "ನಿಮ್ಮ ಆಪ್ತರಲ್ಲಿಯೇ ದ್ರೋಹಿಗಳಿದ್ದಾರೆ— ಜಾಗ್ರತೆಯಿಂದಿರಿ" ಎಂದುಬಿಟ್ಟನು. ಆದರೆ ದ್ರೋಹಿಯ ಹೆಸರನ್ನು ಹೇಳಲಿಲ್ಲ. ಆಗ ಮಹಾರಾಜರು ಸಿಟ್ಟುಗೊಂಡು ಅವನಾರೆಂದು ಗೊತ್ತಿದ್ದವರು ಅಂಬಾಭವಾನಿ ಸಾಕ್ಷಿಯಾಗಿ ಕೂಡಲೆ ತಿಳಿಸಬೇಕೆಂದರು. ನೇತಾಜಿನಾಯಕರು ತಮಗೆ ತಿಳಿದಿದ್ದುದನ್ನು ಹೇಳಿದರು.

**ಗೋ:**— ಹೂಂ! ಆಗಲಿ!—ರಾಯರ ವಿಚಾರಣೆಯಾಯಿತೇ?

**ಮಾ:**— ಏನೋ, ಸ್ವಾಮಿ! ರಾಯರಿಗೆ ಮೊದಲು ಆಡಲಿಕ್ಕೆ ಮಾತೇ ಬಾರದು. ಆದರೆ ಅನಂತರ ಮಾತ್ರ ಸಿಟ್ಟಿನಿಂದ ನಡುಗುತ್ತಿದ್ದರು.

**ಗೋ:**— ಅಲ್ಲವೆ ಮತ್ತೆ! ಅಲ್ಲದ ಸಲ್ಲದ ಮಾತನ್ನು ಹೇಳಿದರೆ ಸಿಟ್ಟುಗೊಳ್ಳುವುದೇ!

**ಕೃ:**— ಹಾಗಲ್ಲ, ಪಂತರೇ! ಕಂಡುದನ್ನು ಹೇಳಿದರೆ ಕೆಂಡದಂತಹ ಸಿಟ್ಟು.

**ಗೋ:**— ಅಬ್ಬ, ಶಾಸ್ತ್ರಿಗಳೇ! ನಿಮ್ಮ ಕುಕಲ್ಪನೆಯೇ!—ನಮ್ಮ ರಾಯರು ಏನೂ ಹೇಳಲಿಲ್ಲವೆ, ಮಾರೋಜಿ?

**ಮಾ:**—ಅವರೇನೋ ಮೊದಲು ಉತ್ತರಕೊಡಲಿಲ್ಲ. ಅನಂತರ, ಬೆಟ್ಟದ ಇಲಿಗೆ ಹೆದರುವ ಸರದಾರನು ತಾನಲ್ಲವೆಂದು ಗದರಿಸಿದರು. ವಿಜಾಪುರದ ಸುಲ್ತಾನನ ಅಚ್ಚುಮೆಚ್ಚಿನ ಸರದಾರನಾದ ತಾನು ಇಲಿಯನ್ನು ಬಿಲದೊಳಗೆ ಓಡಿಸುವೆನೆಂದು ಎದೆತಟ್ಟಿದರು. ನಮಸ್ಕಾರವನ್ನೂ ಮಾಡದೆ ಹಿಂದಿರುಗಿದರು. ಅಬ್ಬ! ಆಗಿನ ಅವರ ವೀರಾವೇಶವೇ? ನಾವೆಲ್ಲರೂ ರಾಯರೊಡನೆ ಹೊರಟು ಬಂದೆವು.

**ಗೋ:**—ಏನು ಗ್ರಹಚಾರವಿದು?—ಶಿವಾಜಿ ರಾಯರನ್ನು ಬಿಟ್ಟುಬಿಟ್ಟನೆ! ಅಲ್ಲ, ಉರಿವ ಬೆಂಕಿಗೆ ಎಣ್ಣೆಹೊಯ್ದನೋ?

**ಮಾ:**—ಬೆಂಕಿಯೋ, ಎಣ್ಣೆಯೋ? ಮಹಾರಾಜರ ಸರದಾರರು ಕೆಲವರೆದ್ದು ನಮ್ಮ ರಾಯರನ್ನು ಹಿಡಿವುದರಲ್ಲಿದ್ದರು.-ಆದರೆ, ಮಹಾರಾಜರು "ದ್ರೋಹಿಗೆ ತಕ್ಕ ಶಾಸ್ತಿಯಾಗುವುದು; ಕೃತಘ್ನನು ಹೊರಟುಹೋಗಲಿ" ಎಂದರು.

**ಕೃ:**—ಹೂ! ಚಂದ್ರರಾಯರ ಸಹಾಯವು ಮಹಾರಾಜರಿಗೆ ತಪ್ಪಿದಂತೆಯೋ.-ಅಯ್ಯೋ! ಹೀಗೆ ಛಲದಿಂದ ಅವರು ಸರದಾರರನ್ನು ಭಂಗಿಸಿದರೆ ಅವರ ಮಹಾಕಾರ್ಯವು ಹೇಗಾಗುವುದೋ?

**ಗೋ:**—ಇವರ ಚಿಂತೆಯೇ ಬೇರೆ-ಪಾಪ! ಏನು ಶಾಸ್ತ್ರಿಗಳೇ? ಅಂತಹ ಮಹಾಕಾರ್ಯವೇನು? ಕೆಲವು ಕೋಟೆಗಳನ್ನು ವಶಮಾಡಿಕೊಂಡು ನೆರೆಹೊರೆಯವರನ್ನು ಪೀಡಿಸುವುದಲ್ಲವೇ?

**ಮಾ:**—ಎಲ್ಲಿಯ ಪೀಡೆ ಸ್ವಾಮಿ? ಅವರ ಜತೆಯಲ್ಲಿದ್ದು ಯುದ್ಧ ಮಾಡುವುದೆಂದರೆ ನಮಗೇನೋ ಅಷ್ಟು ಲವಲವಿಕೆ. ಅವರು ನಮ್ಮನ್ನು ಆದರಿಸುವುದೇನು, ವಿಚಾರಿಸುವುದೇನು, ನಮ್ಮನ್ನು ಹುರಿದುಂಬಿಸುವುದೇನು! ಆಕ್ರಮಿಸಿದ ನಾಡ ಜನರನ್ನು ಉಪಚರಿಸುವುದೇನು!—ಅಲ್ಲ, ಮೊನ್ನೆ ನಮ್ಮ ತಾನೋಜಿಯ ತಾಯಿಗೆ ಜ್ವರವೆಂಬ ವರ್ತಮಾನವು ಬಂತು ಸ್ವಾಮಿ. ಅದು ಮಹಾರಾಜರ ಕಿವಿಗೆ ಹೇಗೆ ಬಿತ್ತೊ? ಅವರು ತಾನೋಜಿಯನ್ನು

ಕರೆದು, ವೆಚ್ಚಕ್ಕೆ ಹಣವನ್ನು ಕೊಟ್ಟು ಅವನನ್ನು ಊರಿಗೆ ಕಳುಹಿಸಿದರು. ಪುಣ್ಯಾತ್ಮ–

**ಗೋ:**—ಆ ಪುಣ್ಯಾತ್ಮನನ್ನು ಬಿಟ್ಟುಬಂದೆಯಲ್ಲ–ಮೂರ್ಖ!

**ಮೂ:**—ನಮ್ಮ ರಾಯರು ಮೊದಲಿಂದಲೂ ನಮ್ಮನ್ನು ಸಲಹಿದವರು. ಅವರನ್ನು ಬಿಡುವುದೆಂತು?–ಇವರಿಬ್ಬರೂ ಸೇರಿ ಮುಹಮ್ಮದೀಯರನ್ನು ಹೊಡೆದೋಡಿಸಬಹುದು. ಆದರೆ ನಮಗೆ ಪುಣ್ಯವಿಲ್ಲ –

**ಗೋ:** –ಅಯ್ಯೋ, ಪಾಪ!–ನೇತಾಜಿಯೆಲ್ಲಿ?

**ಮೂ:**—ಅವರು ಅಲ್ಲಿಯೇ ಇದ್ದಾರೆ ಸ್ವಾಮಿ. ಅವರ ನೂರು ಮಂದಿ ಸೈನಿಕರೂ ಅಲ್ಲಿಯೇ.

**ಗೋ:**—ಹೂಂ! ಹೂಂ! ಅವನು ಶಿವಾಜಿಯ ಪಕ್ಷವನ್ನು ಸೇರಿರಬೇಕು–ದ್ರೋಹಿ-ಅಲ್ಲವೆ, ಮೂರೋಜಿ?

**ಮೂ:**—ನಾನೇನು ಬಲ್ಲೆ?–ಆದರೆ, ಅವರು ಇನ್ನು ನಮ್ಮಲ್ಲಿಗೆ ಬರುವಂತಿಲ್ಲ. ಪಾಪ! ಬಂದರೆ ರಾಯರು ಅವರನ್ನು ಶೂಲಕ್ಕೇರಿಸಿಯಾರು.—ಇರಲಿ ಸ್ವಾಮಿ—ನನಗೇಕೆ ಈ ವಿಚಾರಗಳು? ನನಗೆ ಅಪ್ಪಣೆಯಾಗಲಿ (ನಮಸ್ಕರಿಸುತ್ತಾನೆ).

**ಗೋ:**—ಹೂಂ!—ಆಗಲಿ-ಸುಖವಾಗಿರು. ಚಂದ್ರರಾಯರನ್ನು ಮರೆಯಬೇಡ, ಕಂಡೆಯಾ? (ಮೂರೋಜಿ ತಲೆಯಾಡಿಸುತ್ತಾ ಹೋಗುತ್ತಾನೆ). ಒಮ್ಮೆ ಸ್ವಲ್ಪ ಸುಖದಲ್ಲಿದ್ದೆವು; ಇನ್ನು ಶಿವಾಜಿಯ ಪಡೆಯಿಂದ ಏನೆಲ್ಲ ಅನಾಹುತಗಳಾಗುತ್ತವೋ!-ಹಾ, ಕಷ್ಟ! ಕಷ್ಟ!–

**ಕೃ:**—ಎಂತಹ ಕಷ್ಟ, ಪಂತರೇ? ನೀವು ಅನಾವಶ್ಯಕವಾಗಿ ಬೆದರುತ್ತೀರಲ್ಲ? ನಮ್ಮ ಸಂಕಷ್ಟಗಳನ್ನು ಪರಿಹರಿಸುವುದಕ್ಕೆಯೇ ಮಹಾರಾಜರು ಸ್ವರಾಜ್ಯಸ್ಥಾಪನೆಯ ಮಹಾಕಾರ್ಯಕ್ಕೆ ಕೈಹಚ್ಚಿದುದಲ್ಲವೇ?

**ಗೋ:**—ಓಹೋ, ಶಾಸ್ತ್ರಿಗಳೇ! ನನಗೆ ಗೊತ್ತು–ನಿಮ್ಮ ಸ್ವರಾಜ್ಯ!—ರಾತ್ರಿಯಲ್ಲಿ ಕಳ್ಳಕಾಕರಂತೆ ಅಲೆದಾಡಿ ಒಂದೆರಡು ಕೋಟೆಗಳನ್ನು ಸ್ವಾಧೀನಪಡಿಸಿಕೊಂಡು ನಿಮ್ಮ ಶಿವಾಜಿ ದೊಡ್ಡ ಮಹಾ

ರಾಜನಾಗಿದ್ದಾನೆ. ಅಬ್ಬ! ಅವನ ರಾಜ್ಯಸ್ಥಾಪನೆಯೆ! ಇನ್ನು ನಮಗೆ ರಾಮರಾಜ್ಯ!

**ಕೃ:**—ಉದ್ದೇಶಿಸಿದ ಕೆಲಸವು ಕೈಗೂಡಿದರೆ ನಮಗೆ ರಾಮರಾಜ್ಯವೆ! ಸಂಶಯವೇಕೆ, ಪಂತರೇ?

**ಗೋ:**—ಓಹೋ! ಬಲ್ಲೆ! ಉಣ್ಣಲಿಕ್ಕೆ ತಿನ್ನಲಿಕ್ಕೆ ಗತಿಯಿಲ್ಲದ ಕೆಲವು ಭಿಕಾರಿಗಳನ್ನೂ ಕಾಕಪೋಕರನ್ನೂ ಒಟ್ಟುಗೂಡಿಸಿ ನಿಮ್ಮ ಶಿವಾಜಿ ಮಹಮ್ಮದೀಯರನ್ನು ಓಡಿಸುತ್ತಾನೆ; ಅಲ್ಲವೆ? ಚಂದ್ರರಾಯ ರಂತಹ ರಾಜರಿಗೆ ತಕ್ಕ ಶಾಸ್ತಿಯನ್ನು ಮಾಡುತ್ತಾನೆ! ಮತ್ತೇನು?

**ಕೃ:**—ಮಹಾರಾಜರನ್ನು ನೀವು ಹೀಗೆ ತಿರಸ್ಕರಿಸುವುದೇಕೋ?

**ಗೋ:**—ಅಬ್ಬ! ನಾನು ತಿರಸ್ಕರಿಸಿದುದೆಲ್ಲಿ?

**ಕೃ:**—ಎಲ್ಲಿ?—"ಶಿವಾಜಿ, ಶಿವಾಜಿ" ಎಂದು ನಾಲ್ಕು ಜನರಿದಿರಲ್ಲಿ ಮಾತಾಡಿದರೆ ಹೇಗೆ ಸ್ವಾಮಿ? ಪಂತರೇ!

**ಗೋ:**—ಮತ್ತೆ? ಅವನನ್ನೇನು ಮಹಾರಾಜನೆನ್ನಬೇಕೋ?—ನಾನು ಬ್ರಾಹ್ಮಣನು; ನಾಲ್ಕು ವೇದಗಳನ್ನೋದಿದವನು; ಎರಡಂತೂ ಮುಖಪಾಠವಾಗಿವೆ. ನಾನೂ ಅವನನ್ನು ಬಹುವಚನದಲ್ಲಿ ಕರೆಯಬೇಕೇ?

**ಕೃ:**—ನಮ್ಮ ಗೌರವವನ್ನು ಕಾಪಾಡಿಕೊಳ್ಳಬೇಕಾದರೆ!

**ಗೋ:**—ಏನು? ಬ್ರಾಹ್ಮಣನೂ ಶೂದ್ರನನ್ನು ಗೌರವಿಸುವ ಕಾಲವು ಬಂತೇ! ರಾಮ, ರಾಮ! ಕಲಿಕಾಲ!

**ಕೃ:**—ಬ್ರಾಹ್ಮಣೋದ್ಧಾರವೇ ಮಹಾರಾಜರ ಗುರಿಯಲ್ಲವೇ!

**ಗೋ:**—ಶಾಸ್ತ್ರಿಗಳೇ! ನಿಮ್ಮ ಮಾತುಕೇಳಿ ನನಗೆಲ್ಲಿಲ್ಲದ ಸಿಟ್ಟು ಬರುತ್ತದೆ. ಆಗಲಿ-ಉದ್ಧಾರಮಾಡಲಿ. ಸ್ವರಾಜ್ಯವನ್ನು ಸ್ಥಾಪಿಸಿ ಸಿಂಹಾಸನವನ್ನೇರಲಿ. ಆಗ ಸಭಾಮಧ್ಯದಲ್ಲಿ ಅವ ನನ್ನು ವೇದೋಕ್ತವಾಗಿ ಆಶೀರ್ವದಿಸುತ್ತೇನಂತೆ!

**ಕೃ:**—ಆದರೂ, ಈಗ ನಿಂದಿಸದಿರಬಹುದಷ್ಟೆ?

**ಗೋ:**—(ಹೋಗುತ್ತಾ) ಏನು ಶಾಸ್ತ್ರಿಗಳೇ! ನಾನೆಲ್ಲಿ ಅವನನ್ನು ನಿಂದಿಸಿದೆ? ಮಾತಿನಲ್ಲಿ ನನ್ನಂತಹ ಬ್ರಾಹ್ಮಣೋತ್ತಮನಿಂದ

ಬಹುವಚನವನ್ನಪೇಕ್ಷಿಸಿದರೆ ಆ ಬಹುವಚನವೇ ಅವನಿಗೆ ಶಾಪ ವಾದೀತು!—ಶಾಪ! ಗೊತ್ತೇ? (ನಿಲ್ಲುತ್ತಾನೆ).

**ಕೃ:**—ಓಹೋ! ಬ್ರಾಹ್ಮಣರು ನಿಗ್ರಹಾನುಗ್ರಹಶಕ್ತರಲ್ಲವೇ?

**ಗೋ:**—ಹಾಂ! ಹಾಗೇಗು-ನೀವು ಇನ್ನೂ ಎಳೆಹರೆಯದವರು. ಶಾಸ್ತ್ರಗಳನ್ನೆಲ್ಲ ಓದದೆಯೇ ಶಾಸ್ತ್ರಿಗಳಾದವರು. ನಿಮ್ಮಂತಹವ ರಿಂದಲೇ ಬ್ರಾಹ್ಮಣ್ಯವು ಕೆಟ್ಟಿತು.—ಹೂಂ! ಬ್ರಾಹ್ಮಣರ ಪ್ರಭಾ ವವೇನು ಬಲ್ಲಿರಾ? (ಹೋಗುತ್ತಾ; ಹಿಂದಿರುಗಿ)—ನಿಮ್ಮ ಶಿವಾಜಿ ಬ್ರಾಹ್ಮಣರಲ್ಲಿ ಭಕ್ತಿವಿಶ್ವಾಸದಿಂದಿರಲಿ, ಜೋಕೆ! (ಹೋಗುತ್ತಾನೆ).

**ಕೃ:**—(ಸ್ವಗತ)-ಬ್ರಾಹ್ಮಣರ ಒಣದಂಭಾಚಾರವೇ ಸಮಾಜವನ್ನು ಈ ದುಸ್ಥಿತಿಗೆ ಇಳಿಸಿತು. ವಿದ್ಯಾವಂತರೂ, ಬುದ್ಧಿವಂತರೂ, ಸಕಲ ವಿಷಯಗಳನ್ನು ತಿಳಿಯಲು ಸಮರ್ಥರೂ ಆದ ಇವರೇ ಹೀಗೆ ಹೇಳುವುದೆಂದರೆ!—ಕಷ್ಟ! ಇಂತಹ ಜನರೇ ಸ್ವರಾಜ್ಯಸ್ಥಾಪನೆಗೆ ತೊಡಕು. ಹಳ್ಳಿನಾಡಿನ ಜನರಾದರೂ ಮಹಾರಾಜರ ಮಹಾ ಕಾರ್ಯದ ಪ್ರಭಾವವನ್ನು ತಿಳಿಯುತ್ತಾರೆ. ಆದರೆ,-ಸ್ವಾರ್ಥ ದಿಂದ ಸಂಕುಚಿತವಾದ ಇವರ ದೃಷ್ಟಿಯಲ್ಲಿ ಮಾತ್ರ ಎಲ್ಲವೂ ವಿಪರೀತವಾಗಿ ತೋರುತ್ತದೆ--ಅರಸಿನಕುತ್ತದವನಿಗೆ ಲೋಕವೇ ಹಳದಿಯಂತೆ. ಪಾಪ!—ಹೇಗೂ ಪ್ರಸಂಗವು ಕಠಿನವಾಗುತ್ತಿದೆ.

---

## ದೃಶ್ಯ ೨

(ವಿಶಾಲಗಡದ ಅರಮನೆ. ಖಂಡೋಜಿಯ ಮಹಲು. ಅವನು ಆಲೋಚಿಸುತ್ತಾ ಕುಳಿತಿದ್ದವನು ಥಕ್ಕನೆ ಎದ್ದು ನಿಂತು.)

**ಖಂಡೋಜಿ:**—(ಗಟ್ಟಿಯಾಗಿ ನಕ್ಕು)—(ಆತ್ಮಗತ) ಪಾಪ! ನೇತಾಜಿ! ಮುಂದಾಲೋಚನೆಯಿಲ್ಲದೆ ಕೆಲಸಮಾಡಿದರೆ ಇದೇ ಗತಿ! ಇನ್ನು ನಿನ್ನನ್ನು ಈ ಕೋಟೆಯೊಳಗೆ ಬಿಡುವವರಾರು? ನನ್ನ ತಾರೆ ಯನ್ನು ನೀನು ನೋಡುವುದಾದರೂ ಹೇಗೆ?—

ತಾರೇ! ಚಿಕ್ಕಂದಿನಿಂದಲೂ ಜತೆಯಲ್ಲಿ ಬಳೆದವರು ನಾವು-ಗಂಡಹೆಂಡಿರಾಗಿ ನಾವೆಷ್ಟು ಆಟಗಳನ್ನು ಆಡಿಲ್ಲ? ನಿನ್ನನ್ನು ಮೆಚ್ಚಿಸುವುದಕ್ಕೆಂದು ನಿನಗೆ ಪ್ರಿಯವಾದ ಎಷ್ಟು ಕೆಲಸಗಳನ್ನು ನಾನು ಮಾಡಿಲ್ಲ? ನಮ್ಮ ಕೊಳದಲ್ಲಿ ಬಿರಿದು ಮಗಮುಗಿಸುತ್ತಿದ್ದ ಕಮಲವನ್ನು ನೋಡಿ ನೀನು ಮನಸೋತು ನಿಂದಿರಲು, ನೀರಿಗಿಳಿದು ಈಜಾಡಿ ಹೂ ತಂದು ನಿನಗೆ ಕೊಟ್ಟವರಾರು? ಮರದ ಮೇಲೆ ಗೂಡಿನಲ್ಲಿದ್ದ ಗಿಳಿಮರಿಯನ್ನು ಬಯಸಿದರೆ ಸಿನ್ನಾಳುಗಳು "ಮರವು ಜಾರುತ್ತಲಿದೆ, ಮೇಲೇರಲಾರೆವು" ಎಂದಾಗ ಮರದ ತುತ್ತತುದಿಗೇರಿ ತಂದು ನಿನಗರ್ಪಿಸಲಿಲ್ಲವೆ ನಾನು? ನೀನೆನ್ನ ಮನದ ಬಯಕೆಯನ್ನರಿತು ಸಲಿಸುವ ಗೆಳೆಯನೆಂದ ಆ ಮಾತೆಲ್ಲಿ? ಇಂತಹ ಸುಖವೆ ಯಾವಾಗಲೂ ಇರಬಹುದೊ ಎಂದು ನಾನೊಮ್ಮೆ ಕೇಳಿದಾಗ "ನಮ್ಮಿಬ್ಬರ ಜೀವಾವಧಿ ಇಂತಹ ಸುಖವನ್ನೆ ಕರುಣಿಸುವಂತೆ ಪ್ರತಿದಿವಸವೂ ದೇವರನ್ನು ಪ್ರಾರ್ಥಿಸುವ" ಎಂದೆಯಲ್ಲ!–ಶಸ್ತ್ರವಿದ್ಯಾಭ್ಯಾಸಕಾಲದಲ್ಲಿ ಪ್ರತಿದಿವಸವೂ ಗರಡಿಗೆ ಬಂದು ನನ್ನ ಜತೆಯಲ್ಲಿ ಶಸ್ತ್ರಾಭ್ಯಾಸವನ್ನು ಮಾಡಿದೆಯಲ್ಲವೆ? ವಿರೋಚಿತವಾದ ಆ ವಿದ್ಯೆ ನಿನಗೇಕೆ, ಎಂದೊಮ್ಮೆ ಕೇಳಿದಾಗ ವೀರಪತಿಯನ್ನು ಬಯಸುವ ಸತಿಗೆ ಆ ವಿದ್ಯೆ ಅವಶ್ಯವೆಂದೆಯಷ್ಟೆ? ಆದರೆ, ಈಗ–

ಏನು? ತಾರುಣ್ಯದಲ್ಲಿ ಕಾಲಿಡುವಾಗ ನಿನಗೆ ಇನ್ನೊಬ್ಬ ಗೆಳೆಯನು ಬೇಕೇ?–ಛೀ! ಆ ನೇತಾಜಿಯು ವಂಶವೇನು, ಸಂಪತ್ತೇನು? ಚಂದ್ರರಾಯರ ಏಕಮಾತ್ರ ಪುತ್ರಿ ಅವನಂತಹ ಕುಲವಿಹೀನನನ್ನು ವರಿಸುವುದೆಂದರೇನು?–ರಾಯರಾದರೂ ಸೋದರಳಿಯನಾದ ನನ್ನನ್ನೆ ಮನೆಯಳಿಯನನ್ನಾಗಿ ಸ್ವೀಕರಿಸಿದರೆ ನೀನು ವಿರೋಧಿಸುವುದೇಕೆ ತಾರೇ? ಅಯ್ಯೋ! ನನ್ನ ಪ್ರೇಮಾದರಗಳಿಗೆ ನಿನ್ನ ತಿರಸ್ಕಾರವೆ! –

ಊಹೂ! ಇನ್ನು ನಿನ್ನ ನೇತಾಜಿಯೆಲ್ಲಿ? ಸ್ವಾಮಿದ್ರೋಹಿಯಾದ ಆ ದುಷ್ಟನೆಲ್ಲಿ? ಸ್ಥಾನಮಾನಗಳನ್ನು ಒದಗಿಸಿ ಉದ್ಧರಿಸಿದ ತನ್ನ ಸ್ವಾಮಿಯನ್ನೆ ಅಪಮಾನಗೊಳಿಸಿದ ದ್ರೋಹಿ! ಉಂಡಮನೆಗೆರಡನ್ನು ಬಗೆವಾತನೆ ನೀನು! ನಿನ್ನ ಸ್ವಾಮಿಯ ಮಗಳನ್ನು ಅಪಹರಿಸಲು ಸಂಕಲ್ಪಿಸಿದುದು ವಿಚಿತ್ರವಲ್ಲ! . . .

ದಾರಿಯಲ್ಲಿದ್ದ ಕಂಟಕವನ್ನು ಹೇಗೆ ತೆಗೆವುದೆಂದು ವಿಚಾರಿಸು ತ್ತಿದ್ದೆ. ಈಗ ತಾನಾಗಿಯೇ ದೂರವಾಯಿತಲ್ಲವೇ ಅದು? ಇದನ್ನೆ ಶುಭಸೂಚನೆಯೆನ್ನುವುದು. ನಾನು ಕಾರ್ಯತತ್ಪರನಾಗಬೇಕೆಂಬು ದರ ಚಿಹ್ನೆಯೇ? ನೇತಾಜಿ ದೂರವಾದಷ್ಟು ನನಗೆ ಪ್ರಯೋಜನವಲ್ಲವೇ?

ಇರಲಿ; ಈ ವಿಷಯವನ್ನು ತಾರೆಗೆ ತಿಳಿಸಿ ಅವಳ ಮನಸ್ಸನ್ನು ತಿರುಗಿಸಬೇಕು—ಈಗ ಆಕೆ ಹೂದೋಟದಲ್ಲಿರಬಹುದು. ಇದುವೆ ಒಳ್ಳೆಯ ಸಮಯ—ವೀರಪತಿಯನ್ನು ಬಯಸಿದವಳಲ್ಲವೇ! ಸೇನಾ ನಾಯಕನ ಉಡುಪನ್ನೇ ಧರಿಸಿಕೊಂಡು ಹೋಗುತ್ತೇನೆ.—

ಅವಳನ್ನು ನೋಡಲಿಕ್ಕೆ ಹೋಗುವುದೆಂದರೆ-(ನಕ್ಕು)--ಮನ್ಮಥನಿ ಗಿರುವುದು ಕುಸುಮಶರಗಳಂತೆ. ಆದರೆ, ಅಬ್ಬ! ದುರ್ಭೇದ್ಯವಾದ ನನ್ನ ಕಠಿನಹೃದಯವನ್ನು ಅವು ಹೇಗೆ ಪ್ರವೇಶಿಸುತ್ತವೋ? (ಹೋಗು ವನು).

---

## ದೃಶ್ಯ ೩

(ವಿಶಾಲಗಡದ ಅರಮನೆ. ಅಂತಃಪುರದ ಹಿಂದಿರುವ ಹೂದೋಟ.
ತಾರೆ ಒಂದು ಹಾಸುಗಲ್ಲಿನ ಮೇಲೆ ಕುಳಿತಿದ್ದಾಳೆ.)

**ತಾರೆ:**—(ಆತ್ಮಗತ) ಏನು ತಾಪವಿದು? ನನ್ನ ಮನಸ್ಸಿಗಿಂದು ಸಮಾ ಧಾನವಿಲ್ಲ. ತಂದೆಯವರೇನೋ ಬಹಳ ವಿಚಾರದಲ್ಲಿದ್ದಾರೆ.— ಎಷ್ಟಾದರೂ ಅಪಮಾನವಲ್ಲವೆ? ಅಯ್ಯೋ! ಇಡೀ ಜಾವಳಿಯಲ್ಲಿ ದೊರೆಯಂತೆ ಮೆರೆಯುತ್ತಿದ್ದ ನನ್ನ ತಂದೆಯನ್ನು ದ್ರೋಹಿಯೆಂದು ತಿರಸ್ಕರಿಸಿದರೇ?—

ನನ್ನ ನಾಯಕರು ಅಪರಾಧವನ್ನು ಹೊರಿಸಿದವರಂತೆ. ಸುಳ್ಳು ಹೇಳಿ ತಮ್ಮ ಉತ್ಕರ್ಷವನ್ನು ಸಾಧಿಸುವ ದುರ್ಬುದ್ಧಿ ನೇತಾಜಿನಾಯಕ ರನೇ?-ಛೇ! ಸರಳತೆಯೇ ಆ ಕಣ್ಣುಗಳಿಂದ ಹೊರಹೊಮ್ಮುತ್ತದೆ. ನಿಷ್ಕಳಂಕವಾದ ಹೃದಯವು ಆ ಮುಖದಲ್ಲಿ ಪ್ರತಿಬಿಂಬಿಸುತ್ತದೆ.—

ನಿಜವಾದ ವಿಚಾರವನ್ನಾದರೂ ತಿಳಿವ ಬಗೆಯೆಂತು? ತಂದೆಯವರನ್ನೆ ಪ್ರಶ್ನಿಸುವ ಧೈರ್ಯವೆನಗಿಲ್ಲ!—(ಒಂದು ಬಳಿಯಲ್ಲಿ ಖಂಡೋಜಿನಾಯ್ಕನು ಪ್ರವೇಶಿಸುತ್ತಾನೆ).—ನನ್ನ ಸಖಿಯನ್ನು ಕಳುಹಿಸಿ ಒಂದು ಜಾವವಾಯಿತೋ ಏನೋ? ಅವಳಿನ್ನೂ ಬರಲಿಲ್ಲ! ಪಾಪ! ನನ್ನ ಹೃತ್ತಾಪವು ಅವಳಿಗೇನು ತಿಳಿವುದು? ಅವಳ ಗಂಡನು ರಣರಂಗದಿಂದ ನಿನ್ನೆಯೇ ಹಿಂದಿರುಗಿದವನಲ್ಲವೇ! ಅವನೊಡನೆ ಸುಖಸಲ್ಲಾಪದಲ್ಲಿರಬಹುದು.—ಹೂಂ—ಅವಳಾದರೂ ಸುಖವನ್ನನುಭವಿಸಲಿ—

(ಪ್ರಕಾಶ)—ಸಖೀ! ನೀನು ಬೇಗಬರಬೇಕೆಂದಿಲ್ಲ. ಆದರೆ, ಬರುವಾಗ ಮಾತ್ರ—(ಖಂಡೋಜಿ ಇದಿರು ಬಂದು)

**ಖಂ:**—ಏನನ್ನು ತರಬೇಕು? ವೀಣೆಯನ್ನೇ? ಅಥವಾ ನಿನ್ನ ಮುದ್ದುಗಿಳಿಯನ್ನೇ?

**ತಾ:**—(ಚಕಿತಳಾಗಿ) (ಆತ್ಮಗತ) ಇವನೆಲ್ಲಿಂದ ಬಂದನಪ್ಪ! ಇರಲಿ—
(ಪ್ರಕಾಶ) ವೀಣೆಯನ್ನೂ ಅಲ್ಲ; ಗಿಳಿಯನ್ನೂ ಅಲ್ಲ.

**ಖಂ:**—(ನಕ್ಕು) ಮತ್ತಾರನ್ನು? ನನ್ನನ್ನೆ?

**ತಾ:**—ನಿನ್ನನ್ನು ಕರೆತರುವುದೇಕೋ? ನೀನಾಗಿಯೇ ಬರುತ್ತೀಯಷ್ಟೆ!

**ಖಂ:**—ನಾನಾಗಿ ಬರುವುದಕ್ಕೂ ನೀನು ಆಮಂತ್ರಿಸಿದಾಗ ನಾನು ಬರುವುದಕ್ಕೂ ಬಹಳ ವ್ಯತ್ಯಾಸವಿದೆ- ಬಹಳ ವ್ಯತ್ಯಾಸ!

**ತಾ:**—ಅವಶ್ಯವಿದ್ದಾಗ ಕರೆಯಿಸುವೆನು.

**ಖಂ:**—ಈಗ ಅವಶ್ಯವಿಲ್ಲವೆ?

**ತಾ:**—ಊಹು-ಇಲ್ಲ.

**ಖಂ:**—ಹಾಗಾದರೆ, ಒಬ್ಬಳೆ ಇರಲಪೇಕ್ಷೆಯೆ?

**ತಾ:**—ನಿಜ.

**ಖಂ:**—ನೀನೇನೊ ಗುಣುಗುಟ್ಟುತ್ತಿದ್ದೆಯಲ್ಲ!

**ತಾ:**—ಇರಬಹುದು.

**ಖಂ:**—ಅದೇನು ಮಂತ್ರವೊ?

**ತಾ:**—ಅನಪೇಕ್ಷಿತರನ್ನು ದೂರವೋಡಿಸುವ ಮಂತ್ರ.

**ಖಂ:**—ಅಬ್ಬ! ಮಂತ್ರದ ಪ್ರಭಾವವೇ!—ಅವನು ದೂರಹೋದಂತೆಯೇ!

**ತಾ:**—ಯಾರು?

**ಖಂ:**—ತನಗೆಟಕದ ಹಣ್ಣಿಗೆ ಕೈನೀಡಿದವನು.

**ತಾ:**—ನೀನು ಒಗಟನ್ನು ಹೇಳುವಂತಿದೆ.

**ಖಂ:**—ಆಗಲಿ; ನೀನದನ್ನು ಬಿಚ್ಚಲು ಬಲ್ಲೆಯಷ್ಟೆ.

**ತಾ:**—ನಿನ್ನಷ್ಟು ಓದಿದವಳಲ್ಲ ನಾನು.

**ಖಂ:**—ಅದೇಕೋ?—ನಾವಿಬ್ಬರೂ ಜತೆಯಲ್ಲಿಯೇ ಓದಿದವರು.

**ತಾ:**—ಆದರೂ ನಿನ್ನಲ್ಲಿರುವ ಪಾಂಡಿತ್ಯವು ನನ್ನಲ್ಲಿಲ್ಲ.

**ಖಂ:**—ಹಾಗಾದರೆ ಅಧ್ಯಯನವನ್ನು ಮುಂದುವರಿಸಬೇಕಾಯಿತು.

**ತಾ:**—ಪಾಂಡಿತ್ಯ ಬೇಕಾದರಲ್ಲವೆ?

**ಖಂ:**—ಇಲ್ಲದಿದ್ದರೆ ನನ್ನ ಒಗಟಿನ ಗತಿ?

**ತಾ:**—ನೀನೇ ಸರಳರೀತಿಯಲ್ಲಿ ಹೇಳಿಬಿಡುವುದು.

**ಖಂ:**—ಆಗಲಿ; ನೇತಾಜಿ, ದೂರ—ಬಹುದೂರ ಹೋದನೆಂದೆ.

**ತಾ:**—ನೇತಾಜಿಗೂ ಒಗಟಿಗೂ ಏನು ಸಂಬಂಧ?

**ಖಂ:**—ನೇತಾಜಿಗೂ ನಿನಗೂ ಇರುವ ಸಂಬಂಧವೇ!

**ತಾ:**—ನೀನೇನೋ ಹರಟುವಂತಿದೆ.

**ಖಂ:**—ಇಲ್ಲ. ನನ್ನ ಮಾತು ಸತ್ಯವೆ.

**ತಾ:**—ಯಾವ ಮಾತು?

**ಖಂ:**—ನೇತಾಜಿ ಬಹುದೂರ ಹೋದನೆಂದುದು.

**ತಾ:**—(ಸ್ವಗತ)ಮನವೇ ಸ್ಥೈರಿಸು. ಕೇಳಿಬಿಡುತ್ತೇನೆ.
(ಪ್ರಕಾಶ) ಎಲ್ಲಿಗೆ ಹೋದುದೊ?

**ಖಂ:**—ಹಿಂದಿರುಗಿ ಬಾರದಷ್ಟುದೂರ; ಪುಂಡ ಶಿವಾಜಿಯೊಡನೆ.

**ತಾ:**—ಓಹೋ! ಆಗಲಿ—ಮಹಾರಾಷ್ಟ್ರದಲ್ಲಿಯೇ!

**ಖಂ:**—ಆದರೆ, ನಮ್ಮ ಜಾವಳಿಯ ಪ್ರಾಂತ್ಯದಿಂದ ಬಹಿಷ್ಕರಿಸಲ್ಪಟ್ಟು.

**ತಾ:**—ಅದೇಕೋ ಬಹಿಷ್ಕಾರ?

**ಖಂ:**—ನನ್ನ ಮಾವನ—ನಿನ್ನ ತಂದೆಯ ಮೇಲೆ ಅಪವಾಧವನ್ನು
ಹೊರಿಸಿದ ಮೂರ್ಖನೂ ಜಾವಳಿಯನ್ನು ಪ್ರವೇಶಿಸುವನೇ?

**ತಾ:**—ನಡೆದ ವಿಷಯವನ್ನು ಹೇಳಿದರೆ ದ್ರೋಹವಲ್ಲವಷ್ಟೆ!

**ಖಂ:**—ಸಂಶಯವು ಹೆಚ್ಚುವಂತೆ ಉಪ್ಪುಕಾರ ಹಚ್ಚಿದರೆ?

**ತಾ:**—ಪರಿಣಾಮವನ್ನು ತಿಳಿಯದೆ ಹಾಗೆ ಆಡಿರಬಹುದು.

**ಖಂ:**—ತಾರೇ! ಸ್ವಾರ್ಥಪರನ ಹೃದಯದ ಗಭೀರತೆಯನ್ನು ನೀನು ಅರಿತಿಲ್ಲ. ತನ್ನ ಉನ್ನತಿಕೆಗೋಸ್ಕರ ನಿನ್ನ ತಂದೆಯನ್ನು ಬಲಿಗೊಟ್ಟನು, ಅವನು.

**ತಾ:**—ನಿಜವೇ? ಇದರಿಂದ ಅವರಿಗೇನು ಪ್ರಯೋಜನ?

**ಖಂ:**—ಸಾವಿರ ಸೈನಿಕರ ಮೇಲಣ ಅಧಿಕಾರ-"ಸರದಾರ"ನೆಂಬ ಬಿರುದು.

**ತಾ:**—ನನ್ನ ತಂದೆಯ ಆಶ್ರಯದಲ್ಲಿಯೂ ಇವನ್ನು ಅವರು ಪಡೆಯುತ್ತಿದ್ದರು.

**ಖಂ:**—ಆದರೆ ನಿನ್ನನ್ನು ಪಡೆವುದು ಸಾಧ್ಯವಿರಲಿಲ್ಲ.

**ತಾ:**—(ತಿರಸ್ಕಾರದಿಂದ ನಕ್ಕು) ಏನುಮಾತು? ನನ್ನ ತಂದೆಯನ್ನು ಮೋಸಗೊಳಿಸಿ ನನ್ನನ್ನು ಪಡೆವುದು ಸುಲಭವೆನ್ನುವೆಯಾ?

**ಖಂ:**—ಮಾವಯ್ಯನವರು ಇಲ್ಲಿಲ್ಲದಾಗ ತನ್ನ ಸೈನಿಕರೊಂದಿಗೆ ಬಂದು ನಿನ್ನನ್ನು ಬಲಾತ್ಕಾರದಿಂದ ಎತ್ತಿಕೊಂಡುಹೋದರೆ ಸರಿ.

**ತಾ:**—ಛೇ! ನನ್ನನ್ನಲ್ಲ; ನನ್ನ ಕಳೇವರವನ್ನು.

**ಖಂ:**—ಇದು ಬರಿಯ ಬಾಯಿಮಾತು, ತಾರೆ!

**ತಾ:**—ಏಕೆ? ಬಲಾತ್ಕಾರದಿಂದ ಎಳೆದುಕೊಂಡುಹೋಗಲಿಕ್ಕೆ ನಾನೇನು ಪಶುವೇ? ಇಗೋ! ಇದೇನು? (ಕಠಾರಿಯನ್ನು ತೆಗೆದು) ಶಸ್ತ್ರವಿದ್ಯೆಯನ್ನು ನಾವು ಜತೆಯಲ್ಲಿ ಕಲಿತವರಷ್ಟೆ!

**ಖಂ:**—ಆದರೆ, ಏ, ತಾರೇ! ಪ್ರೇಮದ ಮುಂದೆ ಈ ಕಠಾರಿಯ ಆಟವು ನಡೆವುದಿಲ್ಲ!

**ತಾ:**—ಪವಿತ್ರವಾದ ಪ್ರೇಮವಿದಿರಲ್ಲಿ ಬಲಾತ್ಕಾರಕ್ಕೆ ಸ್ಥಾನವಿಲ್ಲ.

**ಖಂ:**—ಇದು ನಿಜವಷ್ಟೆ?

**ತಾ:**—ನಿಜವೇ!

**ಖಂ:**—ಹಾಗಾದರೆ, ನೇತಾಜಿಯ ಆಲೋಚನೆಯನ್ನು ಬಿಡು.

**ತಾ:**—ಬಿಟ್ಟು –

**ಖಂ:**—ನಿನ್ನಲ್ಲಿ ಅನುರಕ್ತನಾದವನನ್ನು ವರಿಸು.

**ತಾ:**—ಓಹೊ! ಇದಕ್ಕೋಸ್ಕರವೇ ಈ ದೀರ್ಘಪ್ರಸ್ತಾವನೆಯೋ?

**ಖಂ:**—ನಿನ್ನ ಕರ್ತವ್ಯವನ್ನು ತಿಳಿಸುವುದಕ್ಕಿಷ್ಟು ಮಾತುಗಳು.

**ತಾ:**—ಅಬ್ಬ! ಈ ಕರ್ತವ್ಯವೇನೋ?

**ಖಂ:**—ತಂದೆಯನ್ನು ಅಪಮಾನಗೊಳಿಸಿದ ದ್ರೋಹಿಯನ್ನು ದ್ವೇಷಿಸುವುದು. ನಿನ್ನ ಹೃದಯದಲ್ಲಿ ಮೊಳೆತಿರುವ ಪ್ರೇಮಾಂಕುರವನ್ನು ಮುರಿವುದು. ಮೊದಲೆ ಬಿತ್ತಿದ ಬೀಜಕ್ಕೆ ನೀರೆರೆವುದು. ನಿನ್ನಲ್ಲಿ ಅನುರಕ್ತನಾದ ನನ್ನನ್ನು ವರಿಸುವುದು. ನಿನ್ನ ತಂದೆಯವರ ಅಪೇಕ್ಷೆಯನ್ನು ಪೂರೈಸುವುದು.

**ತಾ:**—ಓಹೋ! ಓಹೋ! ಇವೆಲ್ಲವೂ ಒಮ್ಮೆಯೆ ಸಾಧ್ಯವಲ್ಲವಷ್ಟೆ?

**ಖಂ:**—ಆ ಪ್ರೇಮಾಂಕುರಕ್ಕೆ ನೀರೆರೆಯದಿದ್ದರೆ ಸರಿ. ಬೇರೆಲ್ಲವೂ ಬೇಗನೆ ನೆರವೇರುವುವು.

**ತಾ:**—ಹೃದಯದಲ್ಲಿ ತಾನಾಗಿ ಮೊಳೆತುದನ್ನು ಮುರಿವುದಷ್ಟು ಸುಲಭವಲ್ಲ.

**ಖಂ:**—ನಿಜ! ನಿಜ! ಬೆಳೆಯನ್ನು ಹಾಳುಮಾಡಲಿಕ್ಕೆ ಬರುವ ಕಳೆಯ ಸ್ವಭಾವವೇ ಹಾಗೆ!

**ತಾ:**– ಹೂಂ! ಆಗಲಿ.

**ಖಂ:**—ಆದರೆ ಕಳೆಯನ್ನು ಕೀಳಲೇಬೇಕು–ಸಾಧಿಸಬೇಕು.

**ತಾ:** —ಆಗಲಿ; –

**ಖಂ:**—ಆ ನಂಬುಗೆಯನ್ನಿತ್ತರೆ ನಾನೇ ಧನ್ಯನು.

**ತಾ:**—(**ಕಣ್ಣುಕೆರಳಿಸಿ**) ನಂಬುಗೆಯೇ? ಏನೆಂದು?

**ಖಂ:**—(ಆತ್ಮಗತ) ಹೂ. ಸಿಟ್ಟುಬಂದಂತಿದೆ. (**ಸಖಿ ಪ್ರವೇಶಿಸುತ್ತಾಳೆ**).

(ಪ್ರಕಾಶ)—ಓಹೋ! ನಿನ್ನ ಸಖಿ ಈ ಕಡೆ ಬರುತ್ತಿರುವಳು. ನಿನ್ನ ಏಕಾಂತಕ್ಕೆ ಇನ್ನೂ ವಿಘ್ನವೇ?–ಆಗಲಿ, ದ್ರೋಹಿಗಳನ್ನು ಪುರಸ್ಕರಿಸುವುದು ಮರಾಠ ತರುಣಿಯರ ಸ್ವಭಾವವಲ್ಲ–ನೆನಪಿರಲಿ–(**ಹೋಗುತ್ತಾನೆ**).

**ತಾ:**—(**ಅವನನ್ನೇ ನೋಡುತ್ತಾ ಇದ್ದು, ಆಮೇಲೆ**)

ಏನೇ, ಸಖಿ? ಎಷ್ಟು ಹೊತ್ತಪ್ಪ ನಿನಗೆ?–ಏನು? ದೊಡ್ಡ ಯಾತ್ರೆ ಮಾಡಿ ಬಂದೆಯಾ?

ಸ:—ಅಮ್ಮಾ! ಕ್ಷಮಿಸಿರಿ. ನೀವೆಲ್ಲವನ್ನೂ ಕೇಳಿಬರಬೇಕೆಂದಿರಿ. ತಡವಾಯಿತು.

ತಾ:—ಅವರೆಲ್ಲಿದ್ದಾರಂತೆ?

ಸ:—ಮಹಾರಾಜರ ಜತೆಯಲ್ಲಿ.

ತಾ:—ಇಲ್ಲಿಗೆ ಯಾವಾಗ ಬರಬಹುದಂತೆ?

ಸ:—ಹೇಗೆ ಹೇಳುವುದಮ್ಮ!

ತಾ.—ಕೇಳಲಿಲ್ಲವೆ, ನಿನ್ನ ಗಂಡನನ್ನು?

ಸ:—ಅಮ್ಮಾ! ನೇತಾಜಿನಾಯಕರು ದೊಡ್ಡಮನುಷ್ಯರಾದರಂತೆ.

ತಾ: –ಅದೇನೆ?

ಸ:—ಸಾವಿರ ಸೈನಿಕರ ನಾಯಕರು–ಸರದಾರರು.

ತಾ:—(ಆತ್ಮಗತ)–ಏನು ಖಂಡೋಜಿ ಹೇಳಿದುದು ನಿಜವೇ? (ಪ್ರಕಾಶ)—ಸಖೀ! ಅದೇಕಂತೆ, ಒಮ್ಮೆಯೆ ಆ ದೊಡ್ಡ ಪದವಿ?

ಸ:—ಅವರೆ ಕೋಟೆಯಗೋಡೆಯನ್ನೇರಿ ಮಹಾರಾಜರ ಪತಾಕೆಯನ್ನೂರಿದವರಂತೆ.

ತಾ: ಓಹೋ! ಅದಕ್ಕೆ ಪುರಸ್ಕಾರವೋ ಸರದಾರಿಕೆ?

ಸ:—ಹೌದಮ್ಮ, ಹೌದು–ಎಲ್ಲರೂ ಸೇರಿದ ಸಭೆಯಲ್ಲಿ ಮಹಾರಾಜರು ನೇತಾಜಿನಾಯಕರನ್ನು ಹೊಗಳಿ ಅವರಿಗೆ ಖಡ್ಗವನ್ನು ಉಚಿತವಾಗಿ ಕೊಟ್ಟರಂತೆ; "ಸರದಾರ" ಎಂದು ಕರೆದರಂತೆ.

ತಾ:—ಅಲ್ಲವೆ, ಮತ್ತೆ? ಕೋಟೆಯನ್ನೇರಲಿಕ್ಕೆಷ್ಟು ಧೈರ್ಯವಿರಬೇಕು!

ಸ:—ಏನೋ, ನಮ್ಮ ನಾಯಕರಲ್ಲದಿದ್ದರೆ ಮೊನ್ನೆ ಅಪಜಯವೇ ಖಂಡಿತವೆನ್ನುತ್ತಾರೆ, 'ಅವರು'.

ತಾ:—ನಿಜವೆ? ಸಖಿ!

ಸ:—ನಿಮ್ಮ ತಂದೆಯವರು ಸೇನೆಯನ್ನು ಹಿಂದೆಕರೆದರಂತೆ; ಆದರೆ ನಾಯಕರು ಒಂದೇ ಸವನೆ ಮುಂದೊತ್ತಿದರಂತೆ.

**ತಾ:**—ಹೌದು, ಅವರ ಸ್ವಭಾವವೇ ಹಾಗಲ್ಲವೆ ಸಖಿ? ಅವರ ವೀರತ್ವವು ಮುಖದಲ್ಲಿ ತುಳುಕಾಡುತ್ತದೆ. ಅದೇ, ಆ ತೇಜಸ್ಸು.— ಅದಿರಲಿ; ತಂದೆಯವರು ಸೇನೆಯನ್ನು ಹಿಂದೆಕರೆದುದೇಕೋ?

**ಸ:**—ಏಕೋ, ಏನೋ? ನಮಗೆ ಹೇಗೆ ಗೊತ್ತು?

**ತಾ:**—ಆಗಲಿ, ಮಾರೋಜಿಯೇನೆನ್ನುತ್ತಾನೆ?

**ಸ:**—ನಾನು ಕೇಳಿದುದಕ್ಕೆ, ಹೆಂಗುಸಿಗೆ ನಿನಗೇಕೆ ಆ ವಿಚಾರವೆಂದು ಗದರಿಸಿದರಮ್ಮ!

**ತಾ:**—ನಿಜ; ನಮಗೇಕೆ?–ಅಪವಾದದ ವಿಷಯ.

**ಸ:**—ಊಹುಂ! ಅದನ್ನು ಬಾಯ್ಬಿಡುವುದಿಲ್ಲ. ಆದರೆ, ನಾಯಕರು ಸುಳ್ಳು ಹೇಳಲಿಲ್ಲವೆನ್ನುತ್ತಾರೆ.

**ತಾ:**—ಅದು ನನಗೂ ಗೊತ್ತು. ನಾನು ಮೊದಲೆ ಹೇಳಲಿಲ್ಲವೆ ನಿನಗೆ?– ಹಾಗಾದರೆ, ತಂದೆಯವರು ಶತ್ರುಪಕ್ಷವನ್ನು ಸೇರಿದರೆಂಬುದು ನಿಜ.

**ಸ:**—ನಮಗೇಕಮ್ಮ ಆ ವಿಚಾರ? ನೇತಾಜಿಯವರು ಸುಖದಲ್ಲಿದ್ದರೆ ಸರಿ.

**ತಾ:**—ಆಹಾ! ಹಾ! ಎಂತಹ ಜಾಣೆ ನೀನು?

**ಸ:**—ಅದೇಕಮ್ಮ!

**ತಾ:**—ತಂದೆಯ ಕೀರ್ತಿ ಅಪಕೀರ್ತಿಗಳಲ್ಲಿ ನನಗೆ ಪಾಲಿಲ್ಲವೇ?

**ಸ:**—ಚಂದ್ರರಾಯರೆಂದರೆ ನಮ್ಮ ನಾಡಿನವರೆ ಹೆದರಿ ನಡುಗುತ್ತಾರೆ.

**ತಾ:**—ಹೆದರುವುದೆ?–ಹೂಂ!–ಹೆದರುವುದಲ್ಲ; ಗೌರವಿಸುತ್ತಾರೊ?

**ಸ:**—ಭಯವೋ, ಗೌರವವೋ, ನನಗೆ ತಿಳಿಯದಮ್ಮ!

**ತಾ:**—ನಾಯಕರ ವಿಚಾರವನ್ನು ಇನ್ನು ತಿಳಿವುದು ಹೇಗೋ ಏನೋ?

**ಸ:**—ಅವರೆ ಬಂದಾರಮ್ಮ!

**ತಾ:**—ಇನ್ನು ನನ್ನ ನೆನಪೆಲ್ಲಿ, ಅವರಿಗೆ?

**ಸ:**—ಆಗಲಿ; ಸುಖದಲ್ಲಿದ್ದಾರಲ್ಲವೆ? ಅದನ್ನೆ ಮತ್ತೂ ಮತ್ತೂ ಆಲೋಚಿಸಬಾರದಮ್ಮ.

**ತಾ:**—ಆದರೆ ನನ್ನ ಚಿತ್ತವು ಅವರನ್ನರಸಿ ಓಡುತ್ತದಲ್ಲವೆ?

ಸ:— ಅದನ್ನು ಅಂಕೆಯಲ್ಲಿ ಡಬೇಕು.

ತಾ:—ನನಗೆ ಹೇಳುವವಳು ನೀನು ನಾರೋಜಿ ಯುದ್ಧಕ್ಕೆ ಹೋಗಿದ್ದರೆ ಎಷ್ಟು ಚಡಪಡಿಸುತ್ತೀಯೆ ನೀನು! ದಿವಸಕ್ಕೆಷ್ಟು ಸಲ ಅವನ ವಿಷಯವನ್ನೆತ್ತುತ್ತೀ?

ಸ:—ನಾವೆಷ್ಟೋ ಕಾಲ ಸುಖದಿಂದ ಜತೆಯಲ್ಲಿದ್ದವರಲ್ಲವೆ? ಅವರನ್ನು ನಾನು ಮರೆವುದೆಂತು?

ತಾ:—ಆಹಾ! ನಾನೂ ಅಂತಹ ಸುಖವನ್ನೆ ಬಯಸುವುದು.—ನಾನೂ ನನ್ನ ನಾಯಕರನ್ನು ಮರೆಯಲಾರೆ, ತಿಳಿಯಿತೇ?

ಸ:—ಬೇಡಮ್ಮ; ಮರೆಯಬೇಡಿರಿ—ಯಾವಾಗಲೂ ಅದನ್ನೆ ಚಿಂತಿಸುತ್ತಿದ್ದರೆ ಪ್ರಯೋಜನವೇನು?

ತಾ:— ಹೂಂ! ಆಗಲಿ!

ಸ: ಅಮ್ಮಾ! ಮುಸ್ಸಂಜೆಯಾಗುತ್ತಾ ಬಂತು. ಅರಮನೆಗೆ ಹೋಗುವ!

ತಾ: —ಸಖಿ! ನನಗೆ ಕೆಲವು ಹೂಗಳನ್ನು ಕೊಯ್ದುಕೊಡು.

ಸ: - ಇನ್ನು ಹೂವೇಕೆ? ಅವನ್ನು ನೋಯುವುದಾವಾಗ, ಮುಡಿಯುವುದಾವಾಗ?

ತಾ:— ಮುಡಿವುದಕ್ಕಲ್ಲ ಸಖಿ!

ಸ:— ಮತ್ತೆ—?

ತಾ:—ಅರ್ಪಿಸಲಿಕ್ಕೆ —

ಸ:— ಯಾರಿಗೆ?

ತಾ:—ನಿನಗೇಕೆ? ಎಷ್ಟು ಅಧಿಕಪ್ರಸಂಗ? (ಸಿಟ್ಟುಗೊಂಡಂತೆ ಮುಖವನ್ನು ತಿರುಗಿಸುತ್ತಾಳೆ. ಸಖಿ ಹೂಕೊಯ್ಯಲಿಕ್ಕೆ ಹೋಗುತ್ತಾಳೆ).

(ಸ್ವಗತ)—ಅಯ್ಯೋ! ಇನ್ನು ನಾಯಕರ ವಿಚಾರವನ್ನು ತಿಳಿವುದೆಂತು? ಅವರ ಸಮಾಗಮವಾಗುವ ಬಗೆ ಹೇಗೆ? ಹೇ, ದೇವ! ಅವರೆಲ್ಲಿದ್ದರೂ ಅವರ ಪೌರುಷಕ್ಕೆ ಕಳಂಕವನ್ನುಂಟುಮಾಡಬೇಡ. ಅವರಿಗೆ ಆಯುರಾರೋಗ್ಯಗಳನ್ನು ಕರುಣಿಸು. ಅವರ ಕೀರ್ತಿಪ್ರಭೆಯೇ ನನ್ನ ಜೀವಜ್ಯೋತಿ.—ನಮ್ಮ ವಿವಾಹಕ್ಕೆ ತಂದೆಯವರು ಇನ್ನು

ಸಮ್ಮತಿಸುವರೆ?–ಛೀ! ಅಸಂಭವ! ಇನ್ನು ವಿವಾಹವೆಲ್ಲಿ?—ಇರಲಿ; ಒಂದುದನ್ನು ಅನುಭವಿಸಬೇಕಷ್ಟೆ! (ಹೂಕೊಯ್ಯುವಳು)–(ಸಖಿ ಹೂ ಕೊಯ್ದು ತರುವಳು.)

**ತಾ:** —ಓಹೋ! ಎಷ್ಟು ಬೇಗ ಬಂದೆ?–ಸಿಟ್ಟಾಗಬೇಡ ಸಖಿ. ಇವನ್ನೊಂದು ಮಾಲೆಕಟ್ಟಿಕೊಡಬೇಕು.

**ಸ:**—ಹೂಂ!

**ತಾ:** —ಏನು? ಇನ್ನೂ ಸಿಟ್ಟೇ? ಬೇಗ ಕೊಡಬೇಕು, ಕಂಡೆಯಾ!

**ಸ:**—ಹೂಂ!

**ತಾ:**—(ಸಮೀಪಕ್ಕೆ ಹೋಗಿ) ಏನೇ, ಸಖೀ? (ಅವಳ ಕೈಹಿಡಿದು)–ಒಂದು ಮಾತು ಹೇಳಿದರೆ ಹೀಗೂ ಸಿಟ್ಟುಗೊಳ್ಳುವುದೇ?

**ಸ:**—ಅಮ್ಮಾ! ನನಗೆ ಸಿಟ್ಟಿಲ್ಲ.–ಮಾಲೆಕಟ್ಟುತ್ತೇನೆ.

**ತಾ:**—ಸಖಿ! ನೋಡು, ಈ ದೊಡ್ಡ ಗುಲಾಬಿಯನ್ನು ಮಧ್ಯದಲ್ಲಿಟ್ಟು ಕಟ್ಟಬೇಕು. ಒಳಗೆ ಹೋದ ಕೂಡಲೆ; ಬೇಗ!

**ಸ:** —ಆದೀತು, ಅಮ್ಮ! (ಸ್ವಗತ) ಪ್ರೇಮವೆಂದರೆ, ಇದೀಗ.

(ಇಬ್ಬರೂ ನಗುತ್ತಾ ಹೋಗುತ್ತಾರೆ).

---

## ದೃಶ್ಯ ೪

(ಪುರಂದರಗಡದಲ್ಲಿ ಸುಗುಣನಾಯಕನ ಮನೆಯಲ್ಲಿ ಒಂದು ಕೊಠಡಿ. ನೇತಾಜಿ ನೀಲವಾದ ಆಕಾಶವನ್ನು ಕಿಟಕಿಯಿಂದ ನೋಡುತ್ತಾ ವಿಚಾರಮಗ್ನನಾಗಿದ್ದಾನೆ. ಹೈಮವತಿ ಪ್ರವೇಶಿಸುತ್ತಾಳೆ.)

**ಹೈ:**—ನೇತಾ! ಏನಿದು? ನಿನ್ನನ್ನೆಷ್ಟು ಹುಡುಕುವುದು? ಎಷ್ಟು ಕರೆವುದು?

**ನೇ:** —ನಾನು ಈ ಕೋಣೆಯಿಂದ ಹೊರಗೆ ಹೋಗಲೆ ಇಲ್ಲವಲ್ಲ!

**ಹೈ:**—ಸರಿ, ಸರಿ! ಕೋಣೆಯಲ್ಲಿದ್ದರೆ ನನ್ನ ಮಾತು ಕೇಳುವುದಿಲ್ಲವಲ್ಲವೇ? ಈ ಗೋಡೆಗಳಿಗೆ ಸದ್ದಡಗಿಸುವ ಶಕ್ತಿಯಿದೆಯೋ ಏನೋ?

**ನೇ:**—ಅಕ್ಕಾ! ಏಕೆ ಸಿಟ್ಟುಗೊಳ್ಳುತ್ತೀ?

**ಹೈ:**—ಸಿಟ್ಟಿಲ್ಲ ನೇತಾ!—ಅನ್ನಬಡಿಸಿ ಹೊತ್ತಾಯಿತು. ತಣ್ಣಗಾಯಿತೋ ಏನೋ! ಬೇಗ ಊಟಮಾಡಬಾರದೆ?

**ನೇ:**—ನನಗೆ ಹಸಿವಿಲ್ಲ, ಅಕ್ಕಾ! ನೀವು ಊಟಮಾಡಬಹುದು.

**ಹೈ:**—ಏನು? ಗಾಳಿ ತಿಂದು ಬದುಕುತ್ತೀಯೋ? ಬಹುಶಃ ಈ ಕೋಣೆಯ ಗಾಳಿಯಲ್ಲಿ ಅದ್ಭುತಶಕ್ತಿಯಿದೆ. ಕೋಣೆಯಲ್ಲಿರುವವರಿಗೆ ಸದ್ದು ಕೇಳುವುದಿಲ್ಲ; ಹಸಿವಾಗುವುದಿಲ್ಲ.

**ನೇ:**—ಮಧ್ಯಾಹ್ನದಲ್ಲಿ ಊಟಮಾಡಿಲ್ಲವೇ, ನಾನು!

**ಹೈ:**—ಓಹೋ! ಯಥೇಷ್ಟವಾಯಿತು. ನೀನು ಇಲ್ಲಿಗೆ ಬಂದಂದಿನಿಂದ ಒಂದು ಮುಷ್ಟಿಗಿಂತ ಹೆಚ್ಚು ಉಣ್ಣುವುದಿಲ್ಲ. ಆ ಅನ್ನ ನನ್ನ ಬೆಕ್ಕಿಗೂ ಸಾಲದು.

**ನೇ:**—ಹಸಿವಿಲ್ಲದೆ ಹೇಗೆ ಊಟಮಾಡಲಿ, ಅಕ್ಕಾ!

**ಹೈ:**—ಅದಕ್ಕೆಯೆ ಕೇಳಿದೆ—ಬೇರೇನು ತಿಂದಿದ್ದೀಯೆಂದು?

**ನೇ:**—ಏನೂ ತಿನ್ನಲಿಲ್ಲವಕ್ಕಾ-ಏನೋ, ನನಗೆ ಸ್ವಲ್ಪ ದೇಹಾಲಸ್ಯ, ಅಷ್ಟೆ.

**ಹೈ:**—ಆಲಸ್ಯಕ್ಕೆ ಕಾರಣವೂ?

**ನೇ:**—ಆಯಾಸದಿಂದಾಗಿರಬಹುದು.

**ಹೈ:**—ಅಬ್ಬ! ನಿನ್ನಂತಹ ಹುಡುಗರಿಗೂ ಆಯಾಸ! "ಅವರು" ಎಲ್ಲಿಯಾದರೂ ಯುದ್ಧಮಾಡಿ ಹಿಂದಿರುಗಿದರೆ ಕಲ್ಲು, ಕಲ್ಲು ತಿಂದು ಜೀರ್ಣಿಸುವರು.-ನಿನಗೆ ಹಸಿವೆಯೇ ಇಲ್ಲ. ಪಾಪ!

**ನೇ:**—ಅಕ್ಕಾ! ನಿನ್ನ ಒತ್ತಾಯಕ್ಕೆಂದು ಉಂಡರೆ ಜ್ವರವುಂಟಾಗಬಹುದು.

**ಹೈ:**—ಬೇಡವ್ವಾ, ಬೇಡ!—(**ಬಾಗಿಲಿನ ವರೆಗೆ ಹೋಗಿ, ಥಕ್ಕನೆ ಹಿಂದಿರುಗಿ**)— ಓಹೋ! ನಿನ್ನ ಆಲಸ್ಯದ ಕಾರಣವನ್ನು ತಿಳಿದೆ.

**ನೇ:**—ಏನದು?

**ಹೈ:**—ಊಹು! ನನ್ನಿಂದ ಮರೆಮಾಜಲಾರೆ, ನೇತಾ!

**ನೇ:**—ಆಗಲಿ, ಹೇಳಬಹುದಲ್ಲ!

**ಹೈ:**—ವಿಶಾಲಗಡದ ಪೋರಿಯ ಆಲೋಚನೆ ಹಿಡಿದಿದೆ—ಮಾತ್ರ!

**ನೇ:**—(ಮುಖವನ್ನು ತಗ್ಗಿಸಿ) ಅದಕ್ಕೆ ಮದ್ದು.

**ಹೈ:**—ಅವಳನ್ನು ಕರೆತರುವುದು.

**ನೇ:**—ಹೇಗೆ?

**ಹೈ:**—ಬಲಾತ್ಕಾರದಿಂದ; ಮತ್ತೇನು?

**ನೇ:**— ಬಹು ಸುಲಭೋಪಾಯ.—

**ಹೈ:**—ನೀನು ಬರೆಯುತ್ತಿದ್ದೆಯಲ್ಲ! "ಅವಳು ನನ್ನನ್ನು ಬಹಳ ಪ್ರೀತಿಸುತ್ತಾಳೆ—ಬಹಳ"ವೆಂದು.

**ನೇ:**—ಪ್ರೀತಿಸುವುದು ನಿಜ!

**ಹೈ:** —ಹಾಗಾದರೆ ಕರೆತಂದು ಲಗ್ನವಾಗುವುದೆ; ಮತ್ತೇನು?

**ನೇ:**—ಹೂಂ—ಅದೀಗ ಕಷ್ಟ. ತನ್ನ ತಂದೆಯನ್ನು ಅವಮಾನಿಸಿದವನನ್ನು ಅವಳು ವರಿಸುವಳೇ ಎಂಬ ಪ್ರಶ್ನೆ?

**ಹೈ:** —ಹಾಗಾದರೆ ನಿನ್ನನ್ನವಳು ಪ್ರೀತಿಸುವುದಿಲ್ಲ.

**ನೇ:**—ಪ್ರೀತಿಸಿದರೂ ವರಿಸುವಳೋ ಎಂಬುದರಲ್ಲಿ ಸಂದೇಹ.

**ಹೈ:**—ಇದೇನೋ ವಿಚಿತ್ರ; ಹೊಸತೆರದ ಪ್ರೀತಿ.

**ನೇ:** —ಹಾಗಲ್ಲ ಅಕ್ಕಾ! ಅವಳ ಮನಸ್ಸಿನ ಈಗಣ ಸ್ಥಿತಿಯನ್ನು ತಿಳಿವುದು ಕಷ್ಟ.

**ಹೈ:**— ಏನೋ? ನಾವು, ಹೆಂಗುಸರು, ಪ್ರೀತಿಸುವುದೆಂದರೆ ಮನಃಪೂರ್ತಿಯಾಗಿ. ನಮ್ಮ ಪ್ರೀತಿ ಸ್ಥಿತಿಗತಿಗಳನ್ನನುಸರಿಸುವುದಿಲ್ಲ.

**ನೇ:**—ಸಿಟ್ಟುಗೊಳ್ಳಬೇಡ, ಅಕ್ಕಾ! ಅವಳ ತಂದೆಯ ಕುತಂತ್ರವನ್ನು ಹೊರಗೆಡಹಿದುದು; ಒಮ್ಮೊಂದೊಮ್ಮೆ ಅವಳ ತಂದೆಯನ್ನು ತಿರಸ್ಕರಿಸಿ ಮಹಾರಾಜರ ಆಶ್ರಯವನ್ನು ಸೇರಿದುದು; ಇವು ಅವಳ ಮನಸ್ಸನ್ನು ಬದಲಾಯಿಸಲೂ ಬಹುದು. ಅಲ್ಲದೆ, ಖಂಡೋಜಿ ನಾಯಕನು ಅವಳ ಬಾಲ್ಯಸ್ನೇಹಿತನು ಮತ್ತು ಸಂಬಂಧಿ. ನನ್ನನ್ನು ಅನಾವಶ್ಯಕವಾಗಿ ದೂಷಿಸುವುದಕ್ಕೆ ಅವನು ಹಿಂಜರಿವವನಲ್ಲ.—ಈಗ ಅವಳ ಮನಸ್ಸು ಹೇಗಿದೆಯೋ?

**ಹೈ:**— ನಿಜ, ನಿಜ! ಅದನ್ನು ತಿಳಿಯಬೇಕಾಯಿತು.

**ನೇ:**—ಹೇಗೆಂದು ನಾನೂ ವಿಚಾರಿಸುತ್ತಿದ್ದೆ?

**ಹ್ಯೆ:**—ಅದೇ ಹಸಿವಿಲ್ಲ!-ಆಗಲಿ, ನಾನೊಂದುಪಾಯವನ್ನು ಹೇಳು ತ್ತೇನೆ.

**ನೇ:**—ಏನದು?

**ಹ್ಯೆ:**—ನಮ್ಮ ಕೃಷ್ಣಾಜಿಶಾಸ್ತ್ರಿಗಳು ಜಾವಳಿಯವರು. ಅವರ ಅಣ್ಣ ತಮ್ಮಂದಿರು ಅಲ್ಲಿದ್ದಾರೆ. ಅವರ ಹೆಂಡತಿಯ ತವರೂರು ಅದೇ. ನಿನ್ನ ತಾರೆಗೆ ನೀನೊಂದು ಪತ್ರವನ್ನು ಬರೆ. ಶಾಸ್ತ್ರಿಗಳು ಅದನ್ನು ಅವಳಿಗೆ ಕೊಡುವಂತೆ ಮಾಡುತ್ತೇನೆ.

**ನೇ:**—ಅವರದನ್ನು ಚಂದ್ರರಾಯರಿಗೆ ಕೊಟ್ಟರೆ!

**ಹ್ಯೆ:**—ಛೇ! ಆ ಸಂಶಯವೇಕೆ? ಅವರು ಮಹಾರಾಜರ ಪಕ್ಷದವರು. ಜಾವಳಿಯ ಜನರನ್ನು ಮಹಾರಾಜರ ಪಕ್ಷಕ್ಕೆ ಒಲಿಸಿದವರು ಅವರೇ. ಅದೂ ಅಲ್ಲದೆ ಅವರು ನಮ್ಮ ಕುಲಪುರೋಹಿತರು.

**ನೇ:**—ಅವರು ಹೋಗಲು ಒಪ್ಪಬೇಕಷ್ಟೆ!

**ಹ್ಯೆ:**—ನಿನಗೇಕೆ ಆ ವಿಚಾರವು? ನೀನು ಪತ್ರವನ್ನು ಇಂದೇ ರಾತ್ರಿ ಬರೆ. ನಾಳೆ ಮುಂಜಾನೆ ಅವರನ್ನು ಕಳುಹಿಸುತ್ತೇನೆ, ನೋಡು.

**ನೇ:**—ಉತ್ತರವೇನಾದರೂ ಇದ್ದರೆ ತರುವಂತೆ ಹೇಳಿಬಿಡು, ಅಕ್ಕ!

**ಹ್ಯೆ:**—ಆಯಿತಪ್ಪ!

**ನೇ:**—ಭಾವಯ್ಯನವರ ಅನುಮತಿಬೇಡವೆ ಇದಕ್ಕೆ!

**ಹ್ಯೆ:**—ಅಯ್ಯೋ! ಪಾಪ! ನಿನ್ನ ಅವಸ್ಥೆಯನ್ನು ಕೇಳಿದರೆ ಹೀಗೆ ಮಾಡಲಾಗದೆನ್ನುವವರಾರು! ಇರಲಿ, ಈಗ ಸ್ವಲ್ಪ ಹಾಲಲ್ಲಿ ಊಟಮಾಡು. ಆಮೇಲೆ ಪತ್ರವನ್ನು ಬರೆ.

**ನೇ:**—ಹೂಂ—ನಿಜ! ಬಡಿಸಿಟ್ಟ ಅನ್ನವನ್ನು ಬಿಡಬಾರದಂತೆ.

(ಇಬ್ಬರೂ ಹೋಗುತ್ತಾರೆ.)

## ದೃಶ್ಯ ೫

(ವಿಶಾಲಗಡದ ಅರಮನೆ. ರಘುನಾಥರಾಯನ ಮಹಲು.
ಖಂಡೋಜಿಯೂ ರಘುನಾಥರಾಯನೂ ಕುಳಿತಿದ್ದಾರೆ.)

**ಖಂ:**— ಮಾವ! ನಾನಿನ್ನೇನು ಹೇಳಲಿ? ನಮ್ಮ ರಾಜ್ಯವೂ ಗೌರವವೂ ಸಂಪೂರ್ಣವಾಗಿ ನಾಶವಾಗುವ ಕಾಲವೊದಗಿತು.

**ರ:**— ತಡೆವುದು ಹೇಗೆ?

**ಖಂ:**— ನಾನು ಹೇಳಿದೆನಲ್ಲ. ದೊಡ್ಡಮಾವಯ್ಯನವರಿಗೆ ಇನ್ನೂ ಮಹಮ್ಮದೀಯರಲ್ಲಿ ತುಂಬಾ ವಿಶ್ವಾಸ. ವಿಜಾಪುರದ ಸುಲ್ತಾನನಿಗೆ ವಿಧೇಯನಾಗಿದ್ದರೆ ತಾನು ಈ ಪ್ರಾಂತ್ಯದ ರಾಜನಾಗಿಯೇ ಇರಬಹುದೆಂದು ಅವರ ಕಲ್ಪನೆ.

**ರ:** — ಮತ್ತೇನು? ಸುಲ್ತಾನನನ್ನು ಇದಿರಿಸುವುದು ನಮಗೆ ಸಾಧ್ಯವೂ?

**ಖಂ:**— ಸಾಧ್ಯತಾಸಾಧ್ಯತೆಯ ವಿಷಯ ಬೇರೆ!—ಕಾಲಕ್ಕೆ ತಕ್ಕಂತೆ ನಡೆವುದು ಕಾರ್ಯಜಾಣರ ಲಕ್ಷಣ.

**ರ:**— ಸ್ವರಾಜ್ಯವೆಂದು, ವಿಜಾಪುರದವರನ್ನು ದ್ವೇಷಿಸಿ, ಇದ್ದುದನ್ನೂ ಕಳೆದುಕೊಳ್ಳುವುದೆ?

**ಖಂ:**— ಕಳೆದುಕೊಳ್ಳುವುದಲ್ಲ, ಮಾವ! ಉಳಿಸಿಕೊಳ್ಳುವುದು. ಮಹಮ್ಮದೀಯರನ್ನು ಇನ್ನೂ ಆಶ್ರಯಿಸಿದರೆ ನಮ್ಮವರನ್ನು ಎಡವಿದಂತಾಗುವುದು. ಹೇಗೂ ಶಿವಾಜಿ ದಿನೇದಿನೇ ಪ್ರಬಲನಾಗುತ್ತಿದ್ದಾನೆ. ಮಹಾರಾಷ್ಟ್ರದ ನಾಯಕರೆಲ್ಲರೂ ಅವನ ಪಕ್ಷವನ್ನು ವಹಿಸುತ್ತಿದ್ದಾರೆ.

**ರ:** — ಹೂಂ!—ಅದರಿಂದ ನಮಗೇನು ಪ್ರಯೋಜನ?

**ಖಂ:**— ಪ್ರಯೋಜನವಿಲ್ಲ; ತುಂಬ ನಷ್ಟ ಮತ್ತು ಹಾನಿ.

**ರ:**— ನಾವೇನುಮಾಡಬೇಕೆನ್ನುವುದು, ನೀನು?

**ಖಂ:**— ಕಾಲಸ್ಥಿತಿಯನ್ನು ತಿಳಿಯಬೇಕು; ಅದಕ್ಕನುಗುಣವಾಗಿ ವರ್ತಿಸಬೇಕು.

**ರ:**— ಏನೋ? ನಿನ್ನ ಮಾತಿನ ಅರ್ಥವಾಗುವುದಿಲ್ಲ.

**ಖಂ:**—ಮಾವಾ! ನೋರೆಯುವರ ವಂಶಕ್ಕಿದ್ದ ಗೌರವವೇನು? ಈ ಪ್ರಾಂತ್ಯದ ನಾಯಕರಿಗೆ ಈ ವಂಶದ ಮೇಲಿದ್ದ ಅಭಿಮಾನ ವೇನು? ಈ ಮೊದಲು ನಮಗೆ ಸಹಾಯಮಾಡಲಿಕ್ಕೆ ನರೆಹೊರೆಯ ನಾಯಕರು ಎಷ್ಟು ಉತ್ಸುಕತೆಯಿಂದ ಬರಲಿಲ್ಲ?

**ರ:**—(ನಕ್ಕು)-ಅದು ಅಂದಿನ ಮಾತಾಯಿತು.

**ಖಂ:**—ಇಂದಿನ ವಿಪರೀತಸ್ಥಿತಿಗೆ ಕಾರಣವೇನು?

**ರ:**—ಏನೋ? ನಾನರಿಯೆ. ಯುದ್ಧೋತ್ಸಾಹವು ನಾಯಕರಲ್ಲಿ ಕಡ ಮೆಯಾಗಿರಬಹುದು.

**ಖಂ:**—(ಓರೆನೋಟದಿಂದ) ಏನು ಮಾವ? ನನ್ನಲ್ಲಿಯೂ ಮುಚ್ಚುಮರೆಯೆ?

**ರ:**—ಏನೋ? ಅಣ್ಣನ ಮುಂಗೋಪವೂ ಕುತಂತ್ರವೂ ಸ್ವಲ್ಪ ಕಾರಣ ವಾಗಿರಬಹುದು.

**ಖಂ:**—(ನಕ್ಕು)—ಅಬ್ಬ! ಸ್ವಲ್ಪವೇಕೆ? ಸಂಪೂರ್ಣ.—ಈ ನಾಡಿನಲ್ಲಿ ರುವ ಅವ್ಯವಸ್ಥೆಯಿಂದಾಗಿ ಜನತೆಯ ಬಡತನವೂ ದಾರಿದ್ರ್ಯವೂ ಹೆಚ್ಚುತ್ತಿವೆ. ಬಾದಶಹನು ತೆರಿಗೆಯನ್ನು ಕೂಡಿಸುವುದರಲ್ಲಿ ಮಾತ್ರ ದಕ್ಷನು. ಮಾವಯ್ಯನವರು ಜನರನ್ನು ಪೀಡಿಸುವ, ಕರವತ್ತಿ ಅವನಿಗೆ ಕೊಡುವ, ಸರದಾರರು—ಹೀಗೆ, ಬಲಾತ್ಕಾರ ದಿಂದ ತೆಗೆದುಕೊಂಡ ಕಂದಾಯಕ್ಕೆ ಪ್ರತಿಫಲವಾಗಿ ಜನರಿಗೆ ಸಿಕ್ಕುವುದೇನು? ಮಾವ?

**ರ:**—ಏನೂ ಇಲ್ಲ.

**ಖಂ:**—ಹಾಗಾದರೆ, ಜನರು ಬಾದಶಹನನ್ನು ದ್ವೇಷಿಸುವುದು ಸಹಜ ವಲ್ಲವೇ? ಈ ಸಂದರ್ಭದಲ್ಲಿ ಜನರ ಮುಂದಾಳಾಗಿ ನಿಂತು ನಾಡಲ್ಲಿ ಸುಭಿಕ್ಷೆಯನ್ನುಂಟುಮಾಡಲಿಕ್ಕೆ ಪ್ರಯತ್ನಿಸಿದರೆ ಮಾವ ಯ್ಯನವರೇ ರಾಜನಾಗಿ ಮೆರೆಯಬಹುದು.

**ರ:**—ಆದರೆ, ಸ್ವಾಮಿನಿಷ್ಠ ಸರದಾರರಿಲ್ಲವೇ ಬಾದಶಹನಲ್ಲಿ?

**ಖಂ:**—ಓಹೋ! ಯಥೇಷ್ಟ!-ಆದರೆ, ಸ್ವಪ್ರತಿಷ್ಠೆಗೋಸ್ಕರವಲ್ಲವೇ ಸ್ವಾಮಿನಿಷ್ಠೆ?—ಅಂತಹವರು ಬಹು ಸುಲಭದಲ್ಲಿ ನಮ್ಮ ಪಕ್ಷ ವನ್ನು ಸೇರುವಂತೆ ಮಾಡಬಹುದು.

**ರ:**—ಸೇರದಿದ್ದರೆ, "ಇದ್ದುದೂ ಹೋಯಿತು ಮದ್ದಿನ ಗುಣದಿಂದ" ಎಂಬಂತೆ ನಮ್ಮ ಗತಿಯಾಗುವುದಿಲ್ಲವೇ?

**ಖಂ:**—ನಾವು ಈ ಕಾರ್ಯಕ್ಕೆ ಕೈಯಿಕ್ಕದಿದ್ದರೆ ಶಿವಾಜಿ ಯಶಸ್ವಿಯಾಗುತ್ತಾನೆ. ಇದು ನಿಸ್ಸಂದೇಹ.

**ರ:**—ಅವನೇನೋ ಮಹಾತ್ಮ.—ಜನರನ್ನು ಆಕರ್ಷಿಸುವ ಶಕ್ತಿ ಅವನಲ್ಲಿ ವಿಶೇಷ.

**ಖಂ:**—ಅಯ್ಯೋ. ಭ್ರಾಂತಿ!-ನಿಮಗೂ ಈ ಭ್ರಾಂತಿಯೇ, ಮಾವ? ಜನರ ಸುಖಸಂಕಷ್ಟಗಳನ್ನು ವಿಚಾರಿಸಿ ಅವರ ಕಷ್ಟಪರಿಹಾರಕ್ಕೆಂದು ಕೆಲಸಮಾಡಿದರೆ ಅವರು ಉತ್ಸಾಹಗೊಳ್ಳುತ್ತಾರೆ, ಸಹಾಯಮಾಡುತ್ತಾರೆ; ಅಷ್ಟೆ! ಶಿವಾಜಿಯ ಮಹಾತ್ಮ್ಯವು ಜನರ ತಾಳಕ್ಕೆ ಸರಿಯಾಗಿ ಕುಣಿವುದರಲ್ಲಿದೆ.

**ರ:**—ಆಗಲಿ; ಅದಕ್ಕೂ ಯೋಗ್ಯತೆ ಬೇಕಲ್ಲ!

**ಖಂ:**—ಬೇಕಾದುದು ಚಾತುರ್ಯ, ವಾಗ್ಜಾಲ,—ಸ್ವಲ್ಪ ಮುಂಜಾಗ್ರತೆ.

**ರ:**—ಇವು ನಿನ್ನಲ್ಲಿಲ್ಲವೋ?

**ಖಂ:**—ನನ್ನಲ್ಲಿಯೇ ಏಕೆ? ನಿಮ್ಮಲ್ಲಿಯೂ ಇವೆ. ಆದರೆ ನಾವು ಇವನ್ನು ಪ್ರಯೋಗಿಸಲಿಲ್ಲ. ಚಂದ್ರಮಾವಯ್ಯನವರಿಗೆಷ್ಟು ಹೇಳಿದರೂ ಅವರ ಮನಸ್ಸು ಈ ಕಡೆಗೆ ತಿರುಗುವುದಿಲ್ಲ.

**ರ:**—ಅವನು ಬರಿ ಮೂರ್ಖನಲ್ಲವೇ?—ಅವನ ಹಟಮಾರಿತನ!

**ಖಂ:**—(ಆತ್ಮಗತ) ನನ್ನ ಮಂತ್ರದ ಪ್ರಭಾವ-ಹೂಂ—

(ಪ್ರಕಾಶ) ಅವರ ವರ್ತನೆಯಿಂದ ಹಾಗೆಯೆ ಹೇಳಬೇಕಷ್ಟೆ! ಅಲ್ಲದೆ, ಪಾಪ! ಅವರಿಂದ ಇನ್ನುಮುಂದೆ ಯಾವ ಕಾರ್ಯವೂ ಸಾಗುವಂತಿಲ್ಲ.

**ರ:**—ಕಾರಣವೇನು?

**ಖಂ:**—ಅವರಿಗಾದ ಅಪಮಾನದಿಂದಾಗಿ!-ಎಷ್ಟಾದರೂ ಕೃತಘ್ನತೆ ಅಕ್ಷಮ್ಯವಲ್ಲವೇ?—ಛೀ, ಅವರಲ್ಲಿ ಇನ್ನು ವಿಶ್ವಾಸವನ್ನಿಡುವವರಾರು?

ರ:— ಹಾಗಾದರೆ?

ಖಂ: — ಈ ವಿಷಯವನ್ನೆ ನಾನು ಚರ್ಚಿಸುವುದು. — ಈಗ ನಾವು ಕೆಲ ಸಕ್ಕೆ ಕೈಹಚ್ಚಲೇಬೇಕು- ಇಲ್ಲದಿದ್ದರೆ ಸರ್ವನಾಶ.

ರ:—ಆಗಲಿ, ನಿನ್ನ ಸೂಚನೆಯೇನು?

ಖಂ: — ಈ ಪ್ರಾಂತ್ಯದ ಅಧಿಕಾರವನ್ನು ನೀವು ವಹಿಸಬೇಕು; ನಾಯಕರಿಗೆಲ್ಲ ರಾಯಸವನ್ನು ಕಳುಹಿಸಬೇಕು; ಅವರನ್ನು ನಮ್ಮ ಕಡೆಗೆ ಒಲಿಸಿಕೊಳ್ಳಬೇಕು.

ರ: — ಇದ್ದಾನಲ್ಲ ಇನ್ನೂ, ನನ್ನ ಅಣ್ಣ. ಅವನನ್ನು ಮೂಲೆಗೊತ್ತಿ ನಾನು ರಾಜನಾದರೆ ಜನರೇನೆನ್ನುತ್ತಾರೋ?

ಖಂ: —(ಆತ್ಮಗತ)- ಸ್ವಲ್ಪ ಸಂಕೋಚ, ಅಲ್ಲವೇ? —

(ಪ್ರಕಾಶ)—(ನಗುತ್ತಾ) ಮಾವಯ್ಯನವರು ಬೇಟೆಗೆ ಹೋಗಿದ್ದಾರಷ್ಟೆ. ಜಾವಳಿಯ ಅರಣ್ಯಮಧ್ಯದಲ್ಲಿರಬಹುದು. ಅವರೆಂದು ಹಿಂದಿರುಗುವರೋ, ಯಾರು ಬಲ್ಲ?

ರ: —(ನಗುತ್ತಾ) ಏನು? ಬೇಟೆಗೆ ಹೋದವನು ಅಲ್ಲಿಂದಲೆ ಕೈಲಾಸಕ್ಕೋ?

ಖಂ:—ಅಲ್ಲ! ಕಾಡಲ್ಲಿ ದುಷ್ಟಮೃಗಗಳೇನು? ವಿಷಜಂತುಗಳೇನು? ಬೇಟೆಯಲ್ಲಿರುವ ಅಪಾಯಗಳೆಷ್ಟು?

ರ:—ಅಪಾಯಸಂಭವಿಸಬಹುದೆಂದು ನಾವು ಕಾರ್ಯವನ್ನು ಆರಂಭಿಸುವುದೇ?

ಖಂ: —ಅಪಾಯವೊದಗುವಂತೆಯೇ ಕಾರ್ಯಾರಂಭವು!

ರ:—(ಚಕಿತನಾಗಿ) ಹಾ! ಹಾ! ಏನೆಂದೆ?

ಖಂ: —(ಆತ್ಮಗತ) ಹೇಳಬಾರದಿತ್ತು. ಸ್ವಲ್ಪ ಅವಸರವಾಯಿತು.

(ಪ್ರಕಾಶ) ನಮಗೆ ಅಪಾಯವೊದಗದಂತೆಯೇ ಕಾರ್ಯಾರಂಭವಾಗಬೇಕೆಂದೆ.

ರ: — ಅದೀಗ; ಹೇಗೆಂದು ನನಗೇನೂ ಹೊಳೆವುದಿಲ್ಲ?— ಅಣ್ಣನಿರುವಾಗ ನಾನು ಅಧಿಕಾರವನ್ನು ಹೇಗೆ ಸ್ವೀಕರಿಸಲಿ?

ಖಂ: —ಓಹೋ! ನಿಮಗಿಷ್ಟೆಯೋ ಗೊತ್ತು! ದೊಡ್ಡಮಾವಯ್ಯನವರು ಕಾಡಿಗೆ ಹೋದುದೇಕೆ?

ರ:— ತಪಸ್ಸಿಗಲ್ಲ—ಬೇಟೆಗೆಂದು!

ಖಂ:— ಬೇಟೆಯೆಂದು ನೆವಮಾತ್ರ. ಅವರಿಗೆ ಕಾಡಿನಲ್ಲಿಯೇ ಉಳಿದು ಕೊಳ್ಳುವ ಆಲೋಚನೆ.

ರ:— ಖಂಡ್ಯಾ! ನಿಜವೇ ಇದು! ನೀನು ಹೇಗೆ ತಿಳಿದೆ ಈ ಗುಟ್ಟನ್ನು?

ಖಂ:— ಇದರಲ್ಲಿ ಗುಟ್ಟೇನು? ಪಾಪ! ಅವರು ಇನ್ನು ಈ ನಾಡಲ್ಲಿ ಯಾರಿಗೆ, ಹೇಗೆ ಮುಖತೋರಿಸುವುದು?

ರ: — ಪಾಪ, ಅಲ್ಲವೇ?—ಕೃತಘ್ನತೆಗೆ ತಕ್ಕ ಪ್ರಾಯಶ್ಚಿತ್ತ. ಅನುಭವಿ ಸಬೇಕು.

ಖಂ:— ನಿಜ! ಮಾಡುವುದೇನು?—ಏನೇ ಇರಲಿ. ಅವರನ್ನು ಅಲ್ಲಿಯೇ ಸ್ವಸ್ಥವಾಗಿರಿಸುವವನು ನಾನು. (ಎದೆತಟ್ಟಿಕೊಂಡು) ನೀವು ಸಿಂಹಾ ಸನವೇರುವಾಗ ಅವರಿಂದ ಯಾವ ತೊಡಕೂ ಇಲ್ಲದಂತೆ ನಾನು ಮಾಡುವೆನು.

ರ:— ಖಂಡ್ಯಾ! ನಾಯಕರೆಲ್ಲ ನನ್ನ ಪಕ್ಷವನ್ನು ವಹಿಸಬಹುದೋ?

ಖಂ:— ವಂಶಪರಂಪರಾಗತವಾದ ಅಭಿಮಾನದಿಂದ ನಾವು ವರ್ತಿಸಿ ದರೆ! ಯೋಗ್ಯತಾನುಸಾರವಾಗಿ ಅವರನ್ನು ನಾವು ಮನ್ನಿಸಿದರೆ!

ರ: — ಶಿವಾಜಿಯನ್ನೂ ಕುಗ್ಗಿಸಬಹುದೆಂದೇ ನಿನ್ನ ನಂಬುಗೆ?

ಖಂ:— ಮೋರೆವಂಶದವರು ಸ್ವಾತಂತ್ರ್ಯಾಭಿಮಾನದಿಂದ ಸ್ವರಾಜ್ಯಸ್ಥಾ ಪನೆಗೆಂದು ಬದ್ಧಕಂಕಣರಾಗಿದ್ದಾರೆಂದು ತಿಳಿದರೆ ಆ ಪುಂಡ ಶಿವಾ ಜಿಯ ಬೆನ್ನುಹಿಡಿವವರಾರು? ನಾಯಕರೆಲ್ಲ ನಮ್ಮನ್ನು ಸೇರುವು ದರಲ್ಲಿ ಸಂದೇಹವೇ ಇಲ್ಲ.

ರ:— ಆದರೆ . . . (ಆಲೋಚಿಸುತ್ತಾನೆ.)

ಖಂ:— ಸಂಕೋಚವೇನು? ಹೇಳಬಾರದೆ!

ರ: ಅಣ್ಣನ ಅನಂತರ ರಾಜ್ಯಾಧಿಕಾರವು ತಾರೆಗಲ್ಲವೆ?

ಖಂ:— ಅಯ್ಯೋ! ಅವಳ ಪಕ್ಷವನ್ನು ಹಿಡಿವವರಾರು? ಮಾವ!

ರ:— ಹೂಂ—ಇಂದಲ್ಲದಿದ್ದರೆ ನಾಳೆಯಾದರೂ . . . . ಇರಲಿ . . . . ಹೇಗೂ ಅವಳು ನಿನ್ನನ್ನೆ ವರಿಸುವಳಷ್ಟೆ.

ಖಂ:— ಯಾರು ವರಿಸುವುದೋ, ಯಾರನ್ನೋ? ವಿವಾಹದ ಮಾತಿರಲಿ.

**ರ:**—ಛೀ! ಛೀ! ಅದಾಗದು. ತಾರೆ ನಿನ್ನನ್ನೆ ವರಿಸಬೇಕೆಂದು ಅಣ್ಣನ ಅಪೇಕ್ಷೆಯಿದ್ದುದು. ಹಾಗಾಗಲೇಬೇಕು.

**ಖಂ:**—ನಿಮ್ಮ ಅನುಗ್ರಹವಿದ್ದರೆ!

**ರ:**—ಸಂಪೂರ್ಣವಿದೆ. ಹೆದರಬೇಡ.—ಅಲ್ಲ; ಖಂಡ್ಯಾ! ನಾನು ರಾಜನಾದರೂ ನೀನೇ ನನ್ನ ಮುಖ್ಯಮಂತ್ರಿಯಾಗಬೇಕು. ರಾಜನು ಹೇಗೂ ಮಂತ್ರಿಯ ಕೈಬೊಂಬೆಯಷ್ಟೆ! ನನ್ನ ಅನಂತರ ರಾಜ್ಯವು ಸಹಜವಾಗಿಯೂ ನಿನಗೆಯೇ ಲಭಿಸುವುದು. ನನಗೆ ಇನ್ನಾರಿದ್ದಾರೆ?

**ಖಂ:**—(ಆತ್ಮಗತ)—ಇದ್ದಾಳೆ. ವೆಂಕುವಿದ್ದಾಳೆ—ಆದರೆ—ನೀವೆಷ್ಟುಕಾಲ ರಾಜರು!

(ಪ್ರಕಾಶ) ಅಲ್ಲದೆ, ಮಾವ! ಮೋರೆವಂಶದವರು ಈ ಸಿಂಹಾಸನ ವನ್ನೇರದಿದ್ದರೆ ಜನರು ಜಾವಳಿಯ ದೊರೆಯನ್ನು ಮನ್ನಿಸುವರೆಂದು ನನಗೆ ಭರವಸೆಯಿಲ್ಲ.

**ರ:**—ಅಲ್ಲವೇ ಮತ್ತೆ! ನಮ್ಮ ಕುಲವೆಂದರೇನು? ಈ ಮೊದಲು ಎಷ್ಟು ವೀರರಾಗಿ ಹೋದರು ಈ ವಂಶದಲ್ಲಿ? ಯಾವಾಗಲೂ ನಮ್ಮ ವಂಶಜರು ದೊರೆಗಳಂತೆಯೇ ಇದ್ದು ಸ್ವಾಭಿಮಾನವನ್ನು ಕಾದು ಕೊಂಡವರು.

**ಖಂ:**—(ಆತ್ಮಗತ) ಈ ವಂಶದಲ್ಲಿ ಒಬ್ಬನು ಕೃತಘ್ನನು; ನೀನು ಸ್ವಾರ್ಥಾಂಧನು.

(ಪ್ರಕಾಶ) ಆದುದರಿಂದಲೆ ಈ ವಂಶದ ಗೌರವವನ್ನು ಕುಂದಿಸಬಾರದೆಂದು ನನ್ನ ಅರಿಕೆ.

**ರ:**—ಓಹೋ!-ಅರಿಕೆ-ಬುದ್ಧಿವಾದವೆನ್ನಬಾರದೆ?

**ಖಂ:**—ಛೀ, ಛೀ! ಮಂತ್ರಿ ರಾಜನಿಗೆ ಅರಿಕೆಮಾಡುವುದು.

**ರ:**—ಈಗಲೆ ರಾಜಮಂತ್ರಿಗಳೋ?

**ಖಂ:**—ಮತ್ತೇನು? ನನ್ನ ಪಾಲಿಗೆ ನೀವೇ ರಾಜರು. ಅನುಗ್ರಹಿಸಿದರೆ ನಿಮ್ಮ ಕಿಂಕರನಾಗಿರಬೇಕೆಂದು ಬಯಕೆ.

**ರ:**—ಕಿಂಕರನಲ್ಲ ಖಂಡ್ಯಾ! ನನ್ನ ಮಂತ್ರಿ; ಮುಖ್ಯ ಮಂತ್ರಿ.

ಖಂ:— ಅನುಗೃಹೀತನಾದೆನು.

ರ:— ಆಗಲಿ; ರಾಜನಾಗಲಿಕ್ಕೆ ತಕ್ಕ ಹಂಚಿಕೆಗಳನ್ನು ನೀನೇ ಹೂಡು. ಮಂತ್ರಿಯಲ್ಲವೇ ನೀನು?

ಖಂ:— ಅಪ್ಪಣೆ, (ಸ್ವಲ್ಪ ಮುಂದೆಹೋಗಿ ಥಕ್ಕನೆ ಹಿಂದಿರುಗಿ)—ಆದುದಾಗಲಿ ಎಂದು ನೀವು ಸುಮ್ಮನಿರುವುದು ತರವಲ್ಲ. ನೀವೂ ವಿಚಾರಿಸಬೇಕು.

ರ:—ರಾಜನ ಕೆಲಸ ಮಂತ್ರಿಯ ಸೂಚನೆಯಂತೆ ನಡೆವುದು.

ಖಂ:— ಅಪ್ಪಣೆಯಾಗಲಿ, ನನಗೆ (ಎಂದು ಹೋಗುತ್ತಾನೆ-ರಘುನಾಥರಾಯನು ಅಂತಃಪುರಕ್ಕೆ ಹೋಗುತ್ತಾನೆ.)

ಖಂ:— (ಹೋಗುತ್ತಾ, ಆತ್ಮಗತ) ಅಬ್ಬ! ವಂಶದ ದುರಭಿಮಾನವೆ! ಎಂತಹ ಸದ್ವಂಶದವರಲ್ಲಿಯೂ ದುರ್ಗುಣಗಳಿಗೆ ಕಡಮೆಯಿಲ್ಲ-- ದುರಾಶೆಗಳು ಯಥೇಷ್ಟ—ಆದರೂ ಅವರು ಶ್ರೇಷ್ಠರು. ಇದನ್ನೆ ಸಮಾಜವೆನ್ನುವುದು.—

ಇಷ್ಟು ಸುಲಭದಲ್ಲಿ ಈ ಪ್ರಾಣಿ ನನ್ನ ಬಲೆಯಲ್ಲಿ ಬೀಳುವುನೆಂದು ನಾನೆಣಿಸಿರಲಿಲ್ಲ. (ನಗುತ್ತಾ) ಈಗ ಇದರ ಸಹಾಯವು ನನಗೆ ಅಗತ್ಯ. ನಾಯಕರಲ್ಲಾಗಲಿ ತಾರೆಯಲ್ಲಾಗಲಿ ಸಂಶಯ ಕೈಡೆಯಾಗಬಾರದಲ್ಲ!—ತಾರೆಯಿಲ್ಲದ ಸಿಂಹಾಸನವೇಕೆ? ಹೇಗಾದರೂ ಅವಳನ್ನು ಒಲಿಸಬೇಕು; ವರಿಸಬೇಕು. ಆಮೇಲೆ—ಹೂಂ— ಈ ಪಾಪನನ್ನು ಹೊರತಳ್ಳುವುದು ಅರೆಗಳಿಗೆಯ ಕೆಲಸ.— ಸಾವಳ್ಯನಿಗೂ ಮೊಣಕೈಗೆ ಬೆಲ್ಲಹಚ್ಚಿದ್ದೇನೆ. ಅವನ ತಂಗಿಯಿದ್ದಾಳಲ್ಲ—ಆ ವೆಂಕು. ಅವಳ ಬೋಧೆ ನನ್ನ ಮಾವನಿಗೆ ಅವಶ್ಯ. ಅವಳು ತಕ್ಕ ಉಪದೇಶವನ್ನು ಕೊಡುವಂತೆ ಸಾವಳ್ಯನು ಮಾಡುವನು . . .

(ನಕ್ಕು) ಜನರ ಬುದ್ಧಿದೌರ್ಬಲ್ಯದ ಮರ್ಮವನ್ನರಿತು ಅವರವರ ದುರಾಶಾಪೂರ್ತಿಗೆಂದು ಅವರನ್ನು ಕೆಲಸಕ್ಕೆ ಹಚ್ಚಿ ಸ್ವಕಾರ್ಯವನ್ನು ಸಾಧಿಸಿಕೊಳ್ಳುವುದರಲ್ಲಿ ಈ ಖಂಡೋಜಿಗೆ ಸಮಾನರಾರು?

# ಅಂಕ ೨

## ದೃಶ್ಯ ೧

(ವಿಶಾಲಗಡ—ಮಾರೋಜಿಯ ಮನೆಯ ಚಾವಡಿ.
ಸಖು ನೂಲು ತೆಗೆಯುತ್ತಾ ಇದ್ದಾಳೆ.)

**ಸಖು:—**(ಆತ್ಮಗತ)—(ನೂಲು ತೆಗೆವುದನ್ನು ನಿಲ್ಲಿಸಿ) ನಮ್ಮ ತಾರವ್ವನ ಸ್ಥಿತಿ ವಿಚಿತ್ರ. ಕೆಲವು ದಿವಸಗಳಿಂದ ಉಣ್ಣುವುದು, ತಿನ್ನುವುದು, ನಿದ್ರಿಸುವುದು, ಎಲ್ಲ ಅಷ್ಟಷ್ಟೆ. ಎಂತಹ ವಿಕಾರವಪ್ಪ ಇದು? ಕೇಳಿದರೆ ಏನೇನೋ ಹೇಳುತ್ತಾರೆ . . . (ಎದ್ದು ನಿಂತು)
ಅಲ್ಲ, ಮದುವೆಯಾಗಿಲ್ಲ. ನಾಲ್ಕು ದಿವಸ ಜತೆಯಲ್ಲಿದ್ದು ಸಂಸಾರ ಮಾಡಿಲ್ಲ. ಹೋಗಲಿ, ಒಂದೆರಡು ಗಳಿಗೆ ವಿರಾಮ ವಾಗಿ ಕುಳಿತು ಮಾತನಾಡಿದುದೂ ಇಲ್ಲ. ಹೀಗಿದ್ದರೂ ಪ್ರೇಮ ವಂತೆ; ಪವಿತ್ರ ಪ್ರಣಯವಂತೆ. ಕಳೆದ ವಿಜಯದಶಮಿಯ ದಿನದ ಆಟಗಳಲ್ಲಿ ನೇತಾಜಿನಾಯಕರ ಪರಾಕ್ರಮವನ್ನು ನೋಡಿ ದುದೇ ತಡ; ಸರಿ ಆರಂಭವಾಯಿತು; ನಾಯಕರ ಆಲೋಚನೆ. ಈಗಂತೂ "ಅವರು" ದೂರಹೋಗಿದ್ದಾರೆ;-ಏನು ಮಾಡುವುದೆಂದು ನಾನರಿಯೆ!—

ಈಗ ಮಾತನಾಡಿದರೆ ನೇತಾಜಿಯವರ ಕಥೆಹೇಳಬೇಕು, ಅಷ್ಟೆ; ಬೇರೆ ವಿಷಯವನ್ನೆತ್ತಿದರೆ ಬರುವುದು ಸಿಟ್ಟು.—ಇಲ್ಲದಿದ್ದರೆ ಅವರ ಚಿತ್ರವನ್ನು ನೋಡುತ್ತ ಕುಳಿತುಕೊಳ್ಳುವುದು. ಅದನ್ನು ನೋಡಿದಷ್ಟೂ ತೃಪ್ತಿಯಿಲ್ಲ. ಅಯ್ಯೋ, ಕಷ್ಟ!

**ಮಾರೋಜಿ:—**(ಪ್ರವೇಶಿಸಿ) ಏ, ಸಖೂ! ಏ! ಎಲ್ಲಿದ್ದಿ? ಬೇಗ ಬಾ!

**ಸ:—** ಇಲ್ಲಿಯೆ ಇದ್ದೇನಲ್ಲವೆ?–ಅಬ್ಬ! ನಿಮ್ಮ ಕಣ್ಣೆ!

**ಮಾ:—** ಏ! ನೀನು ಹೊರಟುಹೋದಿಯೋ ಎಂದು ಓಡಿಬಂದೆ.

**ಸ:—** ನಿಮಗೆ ತಿಳಿಸದೆ ನಾನು ಹೋದುದಾವಾಗಲೊ?

**ಮಾ:**—ಅಲ್ಲ, ನಾನು ಬರುವಾಗ ತಡವಾಯಿತಲ್ಲವೆ? ಅರಮನೆಗೆ ನೀನು ಕಾಲಕ್ಕೆ ಸರಿಯಾಗಿ ಹೋಗಬೇಕಲ್ಲ! ಏನುಮಾಡುವುದು? ಪರಸೇವೆಯೇ ಕಷ್ಟ.—

ಸಖೂ! ಅದಿರಲಿ; ನಿನ್ನಿಂದೊಂದು ದೊಡ್ಡ ಕೆಲಸವಾಗಬೇಕು.

**ಸ:**—ಓಹೋ! ಸ್ನೇಹಿತರಿದ್ದಾರೆಂದು ತೋರುತ್ತದೆ. ಆಗಲಿ, ಎಷ್ಟು ಜನರಿಗೆ ಅಡುಗೆಯಾಗಬೇಕು? ಹೂಂ!—ನಾನು ಬೇಗ ತಾರಮ್ಮನ ಹತ್ತಿರ ಹೇಳಿಬರುತ್ತೇನೆ. ಈ ಹೊತ್ತು ವೆಂಕುವೇ ಅವರ ಬಳಿಯಲ್ಲಿರಲಿ. ಬೇಕಾದರೆ, ಸಂಜೆ, ಒಂದು ಗಳಿಗೆ ಹೆರಳು ಹಾಕಲಿಕ್ಕೆ ಮಾತ್ರ ಹೋಗುತ್ತೇನೆ. ಹಾಗೆಯೇ ಹೇಳಿಬಿಡುತ್ತೇನೆ.

**ಮಾ:**—ಅಬ್ಬಬ್ಬ!—ಏ, ಪುಣ್ಯಕ್ಕೆ ನೀನು ಓಡಿಹೋಗಲಿಲ್ಲ ಅರಮನೆಗೆ!

**ಸ:**—ನಿಮಗೆ ಯಾವಾಗಲೂ ಹಾಸ್ಯವೆ?

**ಮಾ:**—ಅಲ್ಲ ಸಖು! ನಿಜವಾಗಿಯೂ ನಿನ್ನಿಂದಲೆ ಆಗಬೇಕು ಈ ದೊಡ್ಡ ಕೆಲಸ.

**ಸ:**—ಮಾಡುತ್ತೇನೆಂದರೆ!

**ಮಾ:**—ಎಂತಹದನ್ನು?

**ಸ:**—ಅಡುಗೆಯನ್ನು.

**ಮಾ:**—ನಿನಗೆ ಒಂದೇ ವಿಚಾರ. ಅಡುಗೆಮಾಡುವುದು. ಹೆಂಗುಸರ ಸ್ವಭಾವ!

**ಸ:**—ಬಂತು ಹೆಂಗುಸರ ಜಾತಿಗೆಯೇ ಕೆಟ್ಟ ಹೆಸರು.—ಆಯಿತು, ನಿಮ್ಮ ಜತೆಯಲ್ಲಿ ಯುದ್ಧಕ್ಕೆ ಬರುತ್ತೇನೆ; ಕೋಟೆಯ ಮೇಲೆ ನಾನೆ ಪತಾಕೆಯನ್ನೇರಿಸುತ್ತೇನೆ.

**ಮಾ:**—(ನಗುತ್ತಾ)—ಓಹೋ, ಹೋ! ಹಾಗೆಂದರೇನೇ?

**ಸ:**—ಮೊನ್ನೆ ನೇತಾಜಿನಾಯಕರು ಹಾಗೆಮಾಡಿದರು ಎಂದಿರಲ್ಲ. ಅದು ದೊಡ್ಡ ಕೆಲಸವಂತೆ, ಅಮ್ಮ ಹೇಳುತ್ತಾರೆ. ನಾನೂ ಹಾಗೆ ಮಾಡಿದರೆ—

**ಮಾ:**—ಸರಿ! ನಿನಗೂ ಒಂದು ಸರದಾರಿಕೆ ಸಿಕ್ಕುತ್ತದೆ.

**ಸ:**— ಹೂಂ! ಇರಲಿ! ಅಧಿಕಾರವೆಲ್ಲ ನಿಮಗೆಯೆ!

**ಮಾ:**— ಮತ್ತೆ, ನಿನಗೆ?

**ಸ:**— ನನಗೆ ಅಧಿಕಾರಿಗಳು ಸಿಕ್ಕಿದರೆ ಸಾಕು.

**ಮಾ:**—(ನಕ್ಕು) ಏನೇ, ಇದು? ಎಂತಹ ಹುಚ್ಚು! ಕೋಟೆಯ ಗೋಡೆಯನ್ನೇರುವುದು ಅಷ್ಟು ಸುಲಭವಲ್ಲವೇ?

**ಸ:**—ದೊಡ್ಡ ಕೆಲಸವೆನ್ನುವುದೂ ನೀವೇ. ಈಗ . . .

**ಮಾ:**—ಅಲ್ಲ, ಸಖಿ! ನೋಡು, ಈ ಪತ್ರವನ್ನು ನೋಡು. ಇದು ತಾರಮ್ಮನಿಗೆ.

**ಸ:**—ಮೊದಲೆ ಹೇಳಬಾರದಿತ್ತೆ. ಇಲ್ಲಿ ಕೊಡಿ-ಹೂಂ-ಕೊಡಿಯೆಂದರೆ!

**ಮಾ:**—ಏ! ಮಾತ್ರ ಜೋಕೆ. ಇದು ಬೇರೆಯವರ ಕೈಸೇರಬಾರದು.

**ಸ:**—ನಾನೆಂದರೆ ಅಷ್ಟೂ ತಿಳಿಯದವಳು. (ಮುಖವನ್ನು ತಿರುಗಿಸುತ್ತಾಳೆ).

**ಮಾ:**—ಏ! ಸಿಟ್ಟಾಗಬೇಡ! ಜಾಗ್ರತೆಯಲ್ಲಿರಬೇಕೆಂದು ಹಾಗೆ ಹೇಳಿದೆ.

**ಸ:**—ಆಯಿತಪ್ಪ! ಇಲ್ಲಿ ನಿಮ್ಮೆದಿರಿನಲ್ಲಿ ಸೆರಗಿನಲ್ಲಿ ಕಟ್ಟಿಕೊಳ್ಳುತ್ತೇನೆ. ಅಲ್ಲಿ ಅಮ್ಮನಿದಿರಲ್ಲಿ ಬಿಚ್ಚಿಕೊಡುತ್ತೇನೆ.

**ಮಾ:**— ಇದರ ವಿಚಾರವೇ ಬೇರೆಯವರಿಗೆ ತಿಳಿಯಬಾರದು.

**ಸ:**—ಸೆರಗನ್ನು ಹೀಗೆ ನೆರಿಗೆಯಲ್ಲಿ ಸಿಕ್ಕಿಸಿಡುತ್ತೇನೆ. ಆಯಿತಷ್ಟೆ!

**ಮಾ:**—ಛೇ! ಹಾಗಲ್ಲ ಸಖೀ!

**ಸ:**—ಮತ್ತೆ ಹೇಗೆ?

**ಮಾ:**—ಏ! ಈ ಪತ್ರವೆಲ್ಲಿಂದ, ಗೊತ್ತೋ?

**ಸ:**—(ಆಲೋಚಿಸಿ) ನಿಮ್ಮಿಂದ.

**ಮಾ:**—ನಾನು ತಾರಮ್ಮನಿಗೆ ಪತ್ರಬರೆವುದೇಕೆ ಮರುಳೆ?

**ಸ:**—ಅಲ್ಲ; ಖಂಡೋಜಿನಾಯಕರ ಪತ್ರ.

**ಮಾ:**—ಓಹೋ, ಹೋ! ಅವರು ಪತ್ರವನ್ನು ಬರೆದು ನಿನ್ನ ಮೂಲಕ ಕಳುಹಿಸಬೇಕು, ಅಲ್ಲವೆ? ಅವರೆ ನಿನ್ನ ತಾರಮ್ಮನನ್ನು ನೋಡಿ ಮಾತಾಡಿಸಿದರೆ ಏನಾದೀತೋ?

**ಸ:**—(ಆಲೋಚಿಸಿ) ಮತ್ತಾರದಪ್ಪ, ಈ ಪತ್ರ?

**ಮಾ:**— ಊಹಿಸು, ನೋಡುವ.

**ಸ:**— ನೇತಾಜಿರಾಯರದೊ?

**ಮಾ:**—ಹಾ! ಅದೀಗ –

**ಸ:**— ಅಮ್ಮನಿಗೆಷ್ಟು ಸಂತೋಷವಾದೀತು, ಇದನ್ನು ನೋಡಿದರೆ!

**ಮಾ:**—ಅವರ ಸಂತೋಷದಿಂದ ಗುಟ್ಟು ರಟ್ಟಾಗಬಾರದು, ತಿಳಿಯಿತೆ. ಕೃಷ್ಣಾಜಿಶಾಸ್ತ್ರಿಗಳು ಬಂದಂದಿನಿಂದ ಖಂಡೋಜಿನಾಯಕರಿಗೆ ನಮ್ಮಲ್ಲಿ ಸ್ವಲ್ಪ ಸಂದೇಹ, . . .

**ಸ:**— ಶಾಸ್ತ್ರಿಗಳೊ ಕಾಗದವನ್ನು ತಂದವರು?–ಪುಣ್ಯಾತ್ಮ.

**ಮಾ:**— ಅದಾಯಿತಲ್ಲ. ನಮ್ಮ ರಾಯರ ಕಿವಿಗೆ ಇದು ಬಿದ್ದರೆ, ನಮ್ಮ ಗತಿ?

**ಸ:**— ಬಹಳ ಗುಟ್ಟಿನಲ್ಲಿಯೇ ಕೊಡುತ್ತೇನೆ. ಅಂಜಬೇಡಿ.

**ಮಾ:**— ಅದಕ್ಕೆಯೇ ಎಚ್ಚರಿಸಿದುದು ನಿನ್ನನ್ನು. ಓದಿದ ಕೂಡಲೆ ಇದನ್ನು ಬೂದಿಮಾಡಲಿ; ಹೇಳು, ನಿನ್ನ ತಾರಮ್ಮನ ಹತ್ತಿರ. ಉತ್ತರವಿದ್ದರೆ ಬರೆದುಕೊಡಬೇಕೆಂದು ಹೇಳು–ಈ ಹೊತ್ತೆ ಕೊಡಲಿ. ಶಾಸ್ತ್ರಿಗಳು ನಾಳೆಯೆ ಹೋಗುತ್ತಾರೆ.

**ಸ:**– ಹೂಂ! ಸಂಜೆಗೆಯೇ ತರುತ್ತೇನೆ ಉತ್ತರವನ್ನು. (**ಹೋಗುತ್ತಾಳೆ.**)

**ಮಾ:**—ಏ! ಜೋಕೆ! ತಡಮಾಡಬೇಡ, ಕಂಡೆಯಾ!

**ಸ:** —ಹೂ! ಅಂಜಬೇಡಿ, ಎಂದರೆ!

## ದೃಶ್ಯ ೨

(**ವಿಶಾಲಗಡ; ಅರಮನೆ; ಖಂಡೋಜಿಯ ಮಹಲು.**)

**ಖಂಡೋಜಿ:**—(**ಆತ್ಮಗತ**) ಆ ಮೂದಿಗೂಬೆಯಲ್ಲಿ ಸ್ವಲ್ಪ ಪೌರುಷವಾದರೂ ಇದೆ. ಇದು ಶುದ್ಧ ಮಂಕು. ಆದರೆ ಇದಕ್ಕೂ ರಾಜ್ಯ ಲೋಭ. ಇದೇ ವಂಶದ ಗೌರವವನ್ನುಳಿಸಲಿಕ್ಕೆ ಪ್ರಯತ್ನಿಸುವ

ಹೇಡಿ. ವೆಂಕುವಿನೊಡನೆ ಸರಸಸಲ್ಲಾಪವಾಡಿದಂತಲ್ಲ ರಾಜ್ಯ ಕಾರ್ಯಭಾರ!—

ಅಲ್ಲ, ನನ್ನ ಸಣ್ಣ ಮಾವಯ್ಯನವರಿಗೆ-ನಮ್ಮ ರಘುನಾಥರಾಯರಿಗೆ-ಊರಮೇಲೆ ಊರುಬಿದ್ದರೂ ಗೊತ್ತಿಲ್ಲ. ಪಾಪ! ಅಣ್ಣನು ತನ್ನ ಕುತಂತ್ರಗಳಿಂದಾಗಿ ಹಾಳಾದನು ಎಂದು ಅವರ ಭಾವನೆ. ರಾಜ್ಯ ಕಾರ್ಯದಲ್ಲಿ ತಂತ್ರಕ್ಕೆಷ್ಟು ಪ್ರಾಶಸ್ತ್ಯವಿದೆಯೆಂದು ಅವರಿಗೇನು ಗೊತ್ತು?—(ನಗುತ್ತಾ) ನನ್ನ ಕೆಲಸಕ್ಕೆ ಬೇಕಾದುದು ಇಂತಹವರೇ! ಸ್ವಲ್ಪ ಆಶೆಯನ್ನು ತೋರಿಸಿದುದು ಮಾತ್ರ, ಬಾಯಲ್ಲಿ ನೀರಿಳಿಯುತ್ತದಂತೆ.—ಹೂಂ—ಇವರ ಕಿಂಕರನಾಗಿ ನಾನು ಬಾಳುವುದೇ? ಛೇ! (ಸಾವಳ್ಯನು ಪ್ರವೇಶಿಸುತ್ತಾನೆ).

ಓಹೋ! ಸಾವಳ್ಯ!—ಹೀಗೆ ಬಾ. ಏನು ವಿಶೇಷ?

**ಸಾ:**—ವಿಶೇಷವೆಂದರೆ, ನೇತಾಜಿ ತಾರೆಗೊಂದು ಕಾಗದವನ್ನು ಕಳುಹಿಸಿದುದು.

**ಖಂ:**—ಹಾ! ಅದನ್ನು ತಂದವರಾರು?

**ಸಾ:**—ಇದ್ದಾನಲ್ಲ ನಮ್ಮ ಶಾಸ್ತ್ರಿ! ನಾನು ಮೊದಲೆ ಹೇಳಿದ್ದೆ. ಅವನು ದೊಡ್ಡ ಮಾಟಗಾರ; ಅವನನ್ನು ನಮ್ಮ ನಾಡಿಂದ ಹೊರಗಿರಿಸಬೇಕೆಂದು.—

**ಖಂ:**—ನಿಜ, ನಿಜ! ಆದರೆ ಮಾಡುವುದೇನು? ಮಾವಯ್ಯನವರಿಗೆ ಬ್ರಾಹ್ಮಣರೆಂದರೆ ಬಹಳ ಅಭಿಮಾನ. ಅವರ ಅಭಿಪ್ರಾಯಕ್ಕೆ ವಿರೋಧವಾಗಿ ನಡೆವುದು ಹೇಗೆ?

**ಸಾ:**—ಇದೇ ಅದರ ಪ್ರತಿಫಲ.

**ಖಂ:**—ನೇತಾಜಿಯು ಪತ್ರವೇನೆಂದು?

**ಸಾ:**—ಊಹು!—ಅದನ್ನು ನಾನರಿಯೆ. ಆ ಸಖಿ ಇದ್ದಾಳಲ್ಲ. ಅವಳೇ ಕಾಗದವನ್ನು ತಾರೆಗೆ ಕೊಟ್ಟವಳು.

**ಖಂ:**—ಆ ಪತ್ರವನ್ನು ನಾನು ನೋಡಬೇಕು, ಸಾವಳ್ಯ!

**ಸಾ:**—ಸಾಧ್ಯವಿದ್ದರೆ ನಾನು ತರುತ್ತಿದ್ದೆ. ಆದರೆ, . . .

ಖಂ:—ವೆಂಕುವನ್ನು ಹೇಗೂ ಒತ್ತಾಯಿಸು, ಸಾವಳ್ಯ! ತಾರೆಯಿಲ್ಲದಿರುವಾಗ ಮೆಲ್ಲಗೆ ಎತ್ತಿಹಾಕಲಿ ಅದನ್ನು.

ಸಾ:—ಅದನ್ನು ಹರಿದುಹಾಕಿ ಬೂದಿಮಾಡಿಯಾಯಿತು.

ಖಂ:—ಅಬ್ಬ! ಮುಂಜಾಗ್ರತೆಯೆ!—ಅದನ್ನು ಓದುತ್ತಿದ್ದರೆ ಅವನ ಉದ್ದೇಶವನ್ನು ತಿಳಿಯಬಹುದಿತ್ತು.

ಸಾ:—ಓಹೋ, ಅದನ್ನು ಇನ್ನೂ ತಿಳಿಯಬಹುದು.

ಖಂ:—ಹೇಗೆ?—ಅವಳೇನೂ ಬಾಯ್ಬಿಡುವಂತಿಲ್ಲ.

ಸಾ:—ಬಾಯ್ಬಿಡದಿದ್ದರೂ ಕೈಬಿಡುತ್ತಾಳೆ. ಅವಳು ಬರೆದುದನ್ನು ನೋಡಿದರಾಯಿತು.

ಖಂ:—ಏನು? ನೇತಾಜಿಗೆ ಉತ್ತರವನ್ನು ಬರೆದಿದ್ದಾಳೆಯೋ? ಎಲ್ಲಿದೆ ಆ ಪತ್ರ?

ಸಾ:—ಇಂದು ಸಾಯಂಕಾಲ ಸಖುವಿನ ಕೈಯಲ್ಲಿ ಕೊಡಬೇಕಷ್ಟೆ. ಅದನ್ನು . . .

ಖಂ:—ಓಹೋ! (ಆಲೋಚಿಸಿ) ಸರಿ!

ಸಾ:—ಇನ್ನೂ ಒಂದು ವಿಶೇಷ.

ಖಂ:—ಏನದು?

ಸಾ:—ನಮ್ಮ ಚಿಕ್ಕರಾಯರಿಗೆ ಪಿತ್ತ ತಲೆಗೇರಿದೆ.

ಖಂ:—ಅದನ್ನು ಉದ್ರೇಕಿಸಿದವನು ನಾನೇ. ಸ್ವಲ್ಪ ಸಮಯ ಈ ವಿಕಾರವುಳಿಯಲಿ; ನಮಗೆ ತುಂಬ ಪ್ರಯೋಜನವಿದೆ.

ಸಾ:—ಓಹೋ! ಇನ್ನು ಇದು ಬಹುಕಾಲವುಳಿವುದು.—ವೆಂಕು ಹೇಳುತ್ತಾಳೆ; ಈಗ ರಾಜ್ಯ, ಸಿಂಹಾಸನ, ಪ್ರಜೆಗಳು ಇವುಗಳ ವಿಚಾರವೇ ಅಂತೆ.

ಖಂ:—ಆಕಾಂಕ್ಷೆಯಿದ್ದವನೇ ನಿಜವಾದ ಮಾನವನು. ಅದಿಲ್ಲದವನು ಪಶುಪ್ರಾಯನು.

ಸಾ:—ಆಶೆಯೇನೋ ಬಲವಾಗಿದೆ, ಪಾಪ! ಆದರೆ, ವಿಚಾರವೂ ಚಾತುರ್ಯವೂ ಇಲ್ಲ. ಇದನ್ನು ಜಂತುವೆನ್ನಬೇಕು.

ಖಂ:—(ನಗುತ್ತಾ) ಸಾವಳ್ಯ! ನಿನ್ನಿಂದ ಇನ್ನೊಂದು ಮಹಾಕಾರ್ಯವಾಗಬೇಕು.

ಸಾ:—ಅಪ್ಪಣೆಯಾಗಲಿ.

ಖಂ:—ಸಕಾಲದಲ್ಲಿ ತಿಳಿಸುತ್ತೇನೆ.

ಸಾ:—ಸರಿ, ಸರಿ! ಅಪ್ಪಣೆಯಾದ ಕೂಡಲೆ, 'ಪೆಟ್ಟೊಂದು ತುಂಡೆರಡು.'

ಖಂ:—ಇದ್ದರೆ, ನಿನ್ನಂತಹ ಮಿತ್ರರಿರಬೇಕು; ಶಹಭಾಸ್!

ಸಾ:—ಅಯ್ಯೋ! ನಾನೂ ಮಿತ್ರನೇ? ನಾನು ಪಾದಸೇವಕನು.

ಖಂ:—ಛೇ! ಛೇ! ತೋರಿಕೆಗೆ ನೀನು ನನ್ನ ಭೃತ್ಯನು; ಅಂತರಂಗದಲ್ಲಿ ನನ್ನ ಆಪ್ತಮಿತ್ರನು.

ಸಾ:—ಇದು ನಿಜವಷ್ಟೆ?

ಖಂ:—ನಾನು ಕೆಲಸಮಾಡುವುದು ಹಾಗೆಯೇ ಅಲ್ಲವೆ? ನನ್ನ ಅಂತರಂಗವನ್ನೆ ನಿನಗೆ ತಿಳಿಸಲಿಲ್ಲವೇ?

ಸಾ:—ನಿಜ! ಆದರೆ ನನ್ನ ಬಯಕೆಯು ನೆನಪಿರಲಿ.

ಖಂ:—ಸಾವಳ್ಯ! ಅದನ್ನು ನಾನು ಮರೆವುದೆಂತು? ನನ್ನ ಕಾರ್ಯವು ಕೈಗೂಡಿತೆಂದರೆ ನಿನ್ನ ಅಪೇಕ್ಷೆ ನೆರವೇರಿದಂತೆಯೇ! ಧೈರ್ಯದಿಂದಿರು.

ಸಾ:—(ಆತ್ಮಗತ) ಹೊಣೆಗಾರಿಕೆಯಿಲ್ಲದ ಅಧಿಕಾರವೇ ಮೇಲು. ಇವನೇ ರಾಜನಾಗಲಿ. ಇವನನ್ನು ನಾನು ಕುಣಿಸುತ್ತೇನೆ. (ಪ್ರಕಾಶ) ನನಗೆ ಅಪ್ಪಣೆಯಾಗಲಿ. (ನಮಸ್ಕರಿಸಿ ಹೋಗುತ್ತಾನೆ.)

ಖಂ:—ಇನ್ನೇನಾದರೂ ವಿಶೇಷವಿದ್ದರೆ?—ಮರೆಯಬೇಡ.—ಅವಶ್ಯವಿದ್ದಾಗ ಹೇಳಿಕಳುಹಿಸುತ್ತೇನೆ.

---

## ದೃಶ್ಯ ೩

(ವಿಶಾಲಗಡ. ಅಂತಃಪುರದ ಹಿಂಬದಿಯ ತೋಟ.)
ಖಂಡೋಜಿ ಪ್ರವೇಶಿಸಿ, ಅತ್ತಿತ್ತ ನೋಡಿ, ತಿರುಗಾಡುತ್ತಾ, ಆತ್ಮಗತ.)

**ಖಂ:**— ಏನು? ಈ ವೊದಲೆ ಹೋಗಿರಬಹುದೆ? ಬಂದು ಅರ್ಧಗಳಿಗೆ ಯಾದರೂ ಅವಳ ಸುಳಿವೇ ಇಲ್ಲವಲ್ಲ. ಹೀಗೆ ಸುಮ್ಮನಿರುವುದು ನನ್ನ ಮನಸ್ಸಿಗೆ ಒಗ್ಗುವುದಿಲ್ಲ. ಅಪೇಕ್ಷಿತ ವಸ್ತುವನ್ನು ನಿರೀಕ್ಷಿಸುತ್ತಿರುವುದೆಂದರೆ ಮುಳ್ಳಮೇಲೆ ನಿಂತಂತೆ.— ತಾರೆಯನ್ನೆ ಕೇಳಬಹುದಿತ್ತು ಪತ್ರದ ವಿಷಯವಾಗಿ-(ನಕ್ಕು) ಇದನ್ನೆ ಭ್ರಾಂತಿಯೆನ್ನುವುದು. ಅವಳಿದಿರಲ್ಲಿ ನನ್ನ ಬುದ್ಧಿಯೇ ಬರಡಾಗುತ್ತದೆ. ಅವಳ ಮುಖವನ್ನು ನೋಡಿ ಮಾತನಾಡಲಿಕ್ಕೂ ನನ್ನಿಂದಾಗುವುದಿಲ್ಲ. ಒಮ್ಮಿಂದೊಮ್ಮೆ ಅವಳನ್ನು ಉದ್ರೇಕಗೊಳಿಸಿದರೆ ಎಲ್ಲಿ ಕಾರ್ಯಹಾನಿಯಾಗುತ್ತದೋ ಎಂಬ ಅಂಜಿಕೆ.— ಆದರೆ, ಪತ್ರದ ವಿಚಾರವನ್ನು ತಿಳಿಯದೆ ಉಪಾಯವಿಲ್ಲ. ಸಖುವನ್ನು ನಿರ್ಬಂಧಿಸಿದರೆ ತಾರೆಗೆ ಸಂಶಯವುಂಟಾಗುವುದು. ಏನುಮಾಡಲಿ?— (ಆಲೋಚಿಸಿ)—ಹೂಂ—ಅವಳಿಂದ ಪತ್ರವನ್ನು ಬಲಾತ್ಕಾರದಿಂದಾದರೂ ತೆಗೆದುಕೊಳ್ಳಲೇ ಬೇಕು. ಅವರಿಬ್ಬರ ಉದ್ದೇಶವನ್ನು ತಿಳಿಯಬೇಕು. ಇಲ್ಲದಿದ್ದರೆ; ಪಂಜರದಲ್ಲಿದ್ದ ಪಕ್ಷಿ ಹಾರಿಹೋದರೆ! ಆಮೇಲೆ ಅದನ್ನು ಹಿಡಿವುದು ಕನಸಿನಲ್ಲಿ! (ಸದ್ದಾಗುವುದು) ಹಾ! ಯಾರೋ ಬರುವಂತಿದೆ!— ಇನ್ನಾರು? ಅವಳೇ! (ಸಖು ಪ್ರವೇಶಿಸುತ್ತಾಳೆ)—ಅಬ್ಬ! ಅವಳ ವೇಗವೇನು? ಆನಂದವಲ್ಲವೇ? ಒಡತಿಗೆ ಮಹೋಪಕಾರವನ್ನು ಮಾಡುವವಳು—(ಅಡ್ಡ ತಡೆದು)—ಏನಿದು? ಬಹಳ ಅವಸರ?

**ಸ:**—(ಆತ್ಮಗತ) ಅಯ್ಯೋ! ಹಾ! ಇವರೆಲ್ಲಿಂದ ಬಂದರು? ಸಿಕ್ಕಿಬಿದ್ದೆನಲ್ಲ!

**ಖಂ:**—ಏನು? ಮಾತಿಲ್ಲ—ಅವಸರವೇನೆಂದೆ?

**ಸ:**—ನನ್ನ ಮನೆಗೆಲಸವು ಇನ್ನಾಗಬೇಕಷ್ಟೆ. ಏನುಮಾಡುವುದು? ಹೊಟ್ಟೆಯ ಪಾಡು.

**ಖಂ:**—ಯುದ್ಧಕ್ಕೆ ಸನ್ನದ್ಧಳಾದ ವೀರನಾರಿಯಂತೆ ಈ ಉಡುಪೇನು?

**ಸ:**— ನಮ್ಮ ತಾರಮ್ಮನ ಜಿಂಕೆಯ ಮರಿ–ಅಬ್ಬಾ! ನನ್ನನ್ನು ತೋಟವೆಲ್ಲ ಓಡಿಸಿತು. ಅದನ್ನು ಹಿಡಿದು ಕಟ್ಟಿಹಾಕಿ ಹಾಗೆಯೇ ಬಂದುಬಿಟ್ಟೆ.

**ಖಂ:**—ಅಷ್ಟೆಯೋ? ಅಲ್ಲ, ಸೆರಗಿನ ತುದಿಯಲ್ಲಿ ಏನಾದರೂ ಕಟ್ಟಿ ಕೊಂಡಿದ್ದೀಯೋ ಎಂದು ಕೇಳಿದೆ?

**ಸ:**—ಸೆರಗಿನಲ್ಲೇನು ಕಟ್ಟಿಕೊಳ್ಳುವುದು ಸ್ವಾಮೀ?

**ಖಂ:**—ಏನಾದರೂ ಆಭರಣವನ್ನು. ಎಲ್ಲಿ, ನೋಡುವ.

**ಸ:**—ಅಯ್ಯಯ್ಯೋ! ನಾನು ಎಂದಾದರೂ ಕದ್ದಿದ್ದೇನೋ ಸ್ವಾಮೀ! ಇದೆಂತಹ ಪ್ರಶ್ನೆ? (ಅಳುವಳು.)

**ಖಂ:**—ಹಾಗಾದರೆ ಸೆರಗಿನ ತುದಿಯನ್ನು ತೋರಿಸಬಹುದಲ್ಲ!

**ಸ:**—ನಾವು ಬಡವರೆಂದು ಹೀಗೂ ಹೇಳುವುದೇ?

**ಖಂ:**—ಕಾರಣಾಂತರದಿಂದ ನಾನು ನಿರ್ಬಂಧಿಸಬೇಕಾಗಿದೆ. ಎಲ್ಲಿ? ಬೇಗ ಸೆರಗಿನ ತುದಿಯನ್ನು ತೋರಿಸು!

**ಸ:**—ಅಯ್ಯೋ! ನನ್ನ ಗ್ರಹಚಾರವೇ! (ಸೆರಗಿನ ತುದಿಯನ್ನು ತೋರಿಸಿ) ಎಂದೂ ಇಲ್ಲದ ಸಂಶಯ! (ಹೋಗುತ್ತಾಳೆ.)

**ಖಂ:**—ತಡೆ! ನಿಲ್ಲು! ಅಗೋ, ಆ ಗಂಟಿನಲ್ಲೇನಿದೆ?

**ಸ:**—ಎಲ್ಲಿ ಸ್ವಾಮೀ? ಗಂಟು, ಗಂಟೆಲ್ಲಿದೆ?

**ಖಂ:**—ಅಗೋ, ಸೆರಗಿನ ತುದಿಯಲ್ಲಿ. (ಅವಳನ್ನು ತಡೆಯುತ್ತಾನೆ.)

**ಸ:**—(ಆತ್ಮಗತ) ಅಯ್ಯೋ! ಇನ್ನೇನು ಗತಿ?

(ಪ್ರಕಾಶ) ಓಹೋ! ಇದೋ? ಏನೋ ನಿನ್ನೆ 'ಅವರು' ಸೆರಗಿನ ತುದಿಯಲ್ಲಿ ಒಂದು ಗಂಟುಹಾಕಿಟ್ಟರು;–ಅವರು ಹೇಳಿದ ವಿಷಯವನ್ನು ಮರೆಯಬಾರದೆಂದು. (ಲಜ್ಜೆಯನ್ನು ಪ್ರಕಟಿಸಿ) ಅದನ್ನು ಬಿಚ್ಚಲಿಕ್ಕೆ ಮರೆತೆ. (ಅಳುತ್ತಾಳೆ.)

**ಖಂ:**—ಅಬ್ಬ! ಎಷ್ಟು ಸುಳ್ಳು ಹೇಳುತ್ತೀ? ಅದರಲ್ಲಿರುವುದು ಕಾಗದ ವಲ್ಲವೇ? ಕಾಗದವನ್ನು ಮಡಚಿ ಕಟ್ಟಿದಂತಿದೆ!

**ಸ:**—(ಪುನಃ ಲಜ್ಜೆಯನ್ನು ಪ್ರಕಟಿಸಿ, ಅದನ್ನು ಹಿಡಿದು) ನಿಜ! ಏನೋ ಕಾಗದ ವನ್ನು ಕಟ್ಟಿದ್ದಾರೆಂದು ತೋರುತ್ತದೆ; ದೊಡ್ಡ ಗಂಟಾಗಲಿ ಎಂದು!

ಖಂ:—ಆಗಲಿ; ಆ ಕಾಗದವನ್ನೆ ನಾನು ನೋಡಬೇಕು.

ಸ:—ಇದೆಂತಹ ಮಾತು ಸ್ವಾಮಿ! ಏನೋ ಒಂದು ಕಾಗದ, ಅವರು ಕಟ್ಟಿದ್ದಾರೆಂದರೆ!-

ಖಂ:—ಸದ್ದಿಲ್ಲದೆ ಅದನ್ನು ತೋರಿಸಿದರೆ ಸರಿ. ಇಲ್ಲವಾದರೆ-

ಸ:—ಬೆದರಿಸುವುದೇ? ಬಡ ಹೆಂಗುಸೆಂದು ನನ್ನನ್ನು ಅಡ್ಡ ತಡೆವುದೇ? (ಓಡಲಿಕ್ಕೆ ಪ್ರಯತ್ನಿಸುತ್ತಾಳೆ.)

ಖಂ:—ಓಹೋ! ದ್ರೋಹಿಗಳು ಮನೆಯ ಹೊರಗೆಯೇ ಅಲ್ಲ; ಒಳಗೂ ಇದ್ದಾರೆಂದಾಯಿತು. ಹೂಂ! ಇಲ್ಲಿ ಕೊಡು (ಅವಳ ಕೈ ಹಿಡಿವನು.)

ಸ:—ಅಯ್ಯೋ! ಅಯ್ಯೋ! ನನ್ನನ್ನು ಬಿಡಿರಿ; ಅದನ್ನು ಬಿಚ್ಚಿ ಕೊಡುತ್ತೇನೆ. (ಕಾಗದವನ್ನು ಕೊಡುತ್ತಾಳೆ.)

ಖಂ:—(ಓದುತ್ತಾ) ಸಖೂ! ನನಗೀ ಪತ್ರವು ಬೇಡ. ಅದರ ವಿಷಯಗಳು ಬೇಕಾದುವು.

ಸ:—ಅಯ್ಯೋ! ಅಮ್ಮನವರ ಮನವೆಷ್ಟು ಬೇಯುವುದು ಇದನ್ನು ಕೇಳಿದರೆ!

ಖಂ:—ಇದನ್ನು ತಾರೆಗೆ ಹೇಳುವುದೇ ಬೇಡ.—ತೆಗೆದುಕೋ ನಿನ್ನ ಪತ್ರವನ್ನು (ಅವಳು ಹಿಂಜರಿವಳು.)

ನಿನಗೆ ಅಥವಾ ತಾರೆಗೆ ತ್ರಾಸಕೊಡುವುದಕ್ಕಲ್ಲ ನಾನು ಪತ್ರವನ್ನೋದಿದುದು. ಏನಾದರೂ ಕುತಂತ್ರಗಳು ನಡೆಯುತ್ತವೋ ಎಂದು ತಿಳಿಯಲಿಕ್ಕೆ!

ಸ:—ಅಮ್ಮನವರು ಕುತಂತ್ರನಡೆಯಿಸುವುದಲ್ಲವೇ?

ಖಂ:—ಛೀ! ಹೊರಟುಹೋಗು. ರಾಜ್ಯಕಾರ್ಯಗಳು ನಿನಗೇನು ತಿಳಿವುವು? (ಎಂದು ಕಾಗದವನ್ನು ಅವಳ ಮೈಮೇಲೆ ಬಿಸಾಡುತ್ತಾನೆ. ಅದನ್ನು ಹೆಕ್ಕಿ ತೆಗೆದುಕೊಂಡು ಸಖು ಹೋಗುತ್ತಾಳೆ.)

(ಆತ್ಮಗತ)—ಅಚಲವಾದುದಂತೆ ಅವನ ಪ್ರೇಮ! ಅವನು ಮಾಡಿದುದು ಸ್ವಾಮಿದ್ರೋಹವಲ್ಲ; ಕರ್ತವ್ಯಪಾಲನೆ. ಸಾರ್ವಜನಿಕ ಹಿತದೃಷ್ಟಿಯಿಂದ ಸ್ವಾರ್ಥವನ್ನು ಬದಿಗೊತ್ತಿದುದು.—ಶಿವಾಜಿ ವಿಭೂತಿ

ಪುರುಷನು; ಮಹಾತ್ಮನು! ಅವನಿಗೆ ಸಹಾಯಮಾಡುವುದು ಸಾಮಾನ್ಯರ ಕರ್ತವ್ಯ. ಅಬ್ಬ! ಏನು ತತ್ವಬೋಧೆ! ಅವನು ಹೇಳಬೇಕು, ಇವಳು ನಂಬಬೇಕು.—ಗಹನ ವಿಚಾರಗಳನ್ನೆತ್ತಿ ಅವಳನ್ನು ಮಂಕುಗೊಳಿಸಿದೆಯಲ್ಲ! ಏ ನೇತಾಜಿ!—ನಿನ್ನ ದ್ರೋಹಗಳನ್ನಡಗಿಸಲಿಕ್ಕೆ ಇದಿರಿಟ್ಟ ತತ್ವಗಳೆಂದು, ಪಾಪ, ಅವಳಿಗೆ ಹೇಗೆ ತಿಳಿಯಬೇಕು? ಅನುರಾಗದಿಂದ ಹುಚ್ಚಾದ ತಲೆಯಲ್ಲವೆ ಅವಳದು!—ಹೇ ಮೂರ್ಖ! ನಿನ್ನ ಮಾತುಗಳು ಯಾವಾಗಲೂ ಅವಳ ಕಿವಿಗೆ ಕೇಳುತ್ತಿವೆಯಂತೆ! ಪಾಪ!—ನಿನ್ನನ್ನಿಲ್ಲಿ ಆಮಂತ್ರಿಸಿದ್ದಾಳಷ್ಟೆ! ಬಾ! ನಿನಗೆ ಯೋಗ್ಯ ಪುರಸ್ಕಾರವು ಸಿದ್ಧವಾಗಿದೆ. ಬಾ! ಸಿಂಹದ ಗವಿಯನ್ನು ಒಂದು ಕ್ಷುದ್ರ ಜಂತು ಪ್ರವೇಶಿಸುವಂತೆ ನೀನೂ ವಿಶಾಲಗಡವನ್ನು ಪ್ರವೇಶಿಸು. ಬಾ!—ಇಲ್ಲಿ ಮೃತ್ಯುವನ್ನೆ ವರಿಸುವೆ!

---

## ದೃಶ್ಯ ೪

(ವಿಶಾಲಗಡದ ಅರಮನೆ; ಅಂತಃಪುರ; ತಾರೆಯ ಮಹಲು.
ತಾರೆ ವಿಚಾರಮಗ್ನಳಾಗಿ ಕುಳಿತಿದ್ದಾಳೆ. ಖಂಡೋಜಿ ಪ್ರವೇಶಿಸುತ್ತಾನೆ.
ಅವಳು ನೋಡಿಯೂ ನೋಡದಂತೆ ಸುಮ್ಮನಿರುತ್ತಾಳೆ.)

**ಖಂ:**—ಏನು ತಾರೆ? ಬಹಳ ವಿಚಾರ?

**ತಾ:**—(ಅವನ ಕಡೆಗೆ ಕಣ್ಣು ಹೊರಳಿಸಿ ಸುಮ್ಮನಿರುವಳು.)

**ಖಂ:**—ವಿಚಾರವೇ ಅಲ್ಲ; ಸಿಟ್ಟೂ ಇದೆಯೆಂದಾಯಿತು.

**ತಾ:**—ನನ್ನ ಸಿಟ್ಟು ನನಗೆಯೇ ಕೇಡು.

**ಖಂ:**—ಹಾಗೇನು ಬಂದುದು?

**ತಾ:**—ನನ್ನ ಮನೆಯಲ್ಲಿಯೇ ಬೇರೆಯವರು ಅಧಿಕಾರ ನಡೆಯಿಸುವುದಾದರೆ!

**ಖಂ:**—ಅವರಿಗೆ ತಕ್ಕ ಶಿಕ್ಷೆಯನ್ನು ವಿಧಿಸಲಿಕ್ಕೆ ಈ ಖಂಡೋಜಿಯಿಲ್ಲವೇ? ಮಾವಯ್ಯನವರ ಅಪ್ಪಣೆಯಂತೆ ಇಲ್ಲಿಯ ಕಾರ್ಯಭಾರವನ್ನು ನಾನೇ ಈಗ ನಡೆಯಿಸಬೇಕಷ್ಟೆ!

**ತಾ:**—ಬೇಲಿಯೇ ಹೊಲವನ್ನು ಮೇವುದಿದ್ದರೆ?

**ಖಂ:**—ನನ್ನಲ್ಲಿಯೂ ನಿನಗೆ ವಿಶ್ವಾಸವಿಲ್ಲವೇ?

**ತಾ:**—ಯಾರಲ್ಲಿ ?

**ಖಂ:**—ನನ್ನಲ್ಲಿ.

**ತಾ:**—(ಕಣ್ಣು ಕೆರಳಿಸಿ ಅವನನ್ನೆ ನೋಡುತ್ತಾಳೆ.)

**ಖಂ:**—ಈ ಹೊತ್ತು ಹೊಸರೀತಿ; ಆಗಲಿ. ಅಂತಹ ವಿಶ್ವಾಸಘಾತದ ಕೆಲಸವನ್ನೇನು ಮಾಡಿದೆನು?

**ತಾ:**—ನಿನಗೆ ನಾಚುಗೆಯಿಲ್ಲವೇ?

**ಖಂ:**—ಇದೊಂದು ಗಹನವಾದ ಪ್ರಶ್ನೆ.

**ತಾ:**—ವಕ್ರವಾದ ನಡತೆಯುವರಿಗೆ ಗಹನವಾದುದೇ!

**ಖಂ:**—ಆಗಲಿ, ನಾನು ಮಾಡಿದ ಅಂತಹ ಕೆಲಸದ ಅರಿವೇ ನನಗಿಲ್ಲ!

**ತಾ:**—ಬೇರೆಯುವರಿಗಿದ್ದ ಪತ್ರವನ್ನು ಬಲಾತ್ಕಾರದಿಂದ ತೆಗೆದುಕೊಂಡು ಓದುವುದು ಮರ್ಯಾದೆವಂತರ ಕ್ರಮವಲ್ಲ.

**ಖಂ:**—ಓಹೋ! ಇದಕ್ಕೆಯೇ ಈ ಸಿಟ್ಟು?

**ತಾ:**—ಅಲ್ಪನ ದೃಷ್ಟಿಯಿಂದ ಇದು ಅಲ್ಪವಾದ ಕೆಲಸವೇ!

**ಖಂ:**—ಮುಂದಾಲೋಚನೆಯುಳ್ಳವನು ಮಾಡಬೇಕಾದ ಕೆಲಸವಾದುದರಿಂದ.—

**ತಾ:**—ಇರಬಹುದು. ದೂರಾಲೋಚನೆಯೂ ದುರಾಲೋಚನೆಯೂ ಜತೆಯಲ್ಲಿಯೇ ಇರಬಹುದು.

**ಖಂ:**—ಏಕೆ ತಾರೆ! ಆ ಪತ್ರವನ್ನು ಹಿಂದೆ ಕೊಡಲಿಲ್ಲವೆ? ದುರಾಲೋಚನೆಯೆನ್ನಬೇಡ.

**ತಾ:**—ಹಿಂದೆ ಕೊಟ್ಟುದು ಬಹಳ ಉಪಕಾರವಾಯಿತು. ಇನ್ನೇನು?

**ಖಂ:**—ಆ ವಿಚಾರವನ್ನೆ ತಿಳಿಸಲಿಕ್ಕೆಂದು ನಾನು ಬಂದುದು.

**ತಾ:**—ಅದು ನನಗೆ ಮೊದಲೆ ತಿಳಿದಿದೆ.

**ಖಂ:**—ನಾನು ಪತ್ರವನ್ನೋದಿದುದೇಕೆಂದು?

**ತಾ:**—ಮುಂದಾಲೋಚನೆಯಿಂದ.—ತಿಳಿಯಿತು.

**ಖಂ:**—ನಿನ್ನ ತಂದೆಗೂ ನಮ್ಮ ರಾಜ್ಯಕ್ಕೂ ಎಂತಹ ವಿಪತ್ತು ಸಮೀಪಿಸಿರುವುದೆಂದು ತಿಳಿದರೆ ನೀನು ಹೀಗೆ ಮಾತನಾಡಲಾರೆ.

**ತಾ:**—ನಿನ್ನಂತಹ ವಕ್ರಗಾಮಿಗಳಿರುವುದೇ ದೊಡ್ಡ ವಿಪತ್ತು.

**ಖಂ:**—ಶಿವಾಜಿ ನೇತಾಜಿಗಳಂತಹ ಸ್ವಾರ್ಥಪರರಿರುವುದೇ ವಿಪತ್ತು.

**ತಾ:**—ಛೀ! ಮೂರ್ಖ! ತೊಲಗತ್ತ.

**ಖಂ:**—ಹೇಳಬೇಕಾದುದನ್ನು, ನೀನು ಅಗತ್ಯವಾಗಿ ಕೇಳಬೇಕಾದುದನ್ನು, ಹೇಳಿ ಹೊರಡುತ್ತೇನೆ. ಮಾವಯ್ಯನವರು ಬೇಟೆಗೆ ಹೋಗುವಾಗ-ನಾನು ಬಹಳ ಜಾಗ್ರತೆಯಿಂದಿರಬೇಕು, ಶಿವಾಜಿಯ ಕುತಂತ್ರವನ್ನು ತಿಳಿಯುತ್ತಿರಬೇಕು ಎಂದ ನೆನಪಿದೆಯೋ?

**ತಾ:**—(ಮೌನ.)

**ಖಂ:**—ಅವರು ಬಹಳ ದೂರದಲ್ಲಿದ್ದಾರೆಂದು ಶಿವಾಜಿಯ ಕಡೆಯವರು ನಮ್ಮ ಜಾವಳಿಯಲ್ಲಿ ತಿರುಗುತ್ತಿದ್ದಾರೆ. ಕೃಷ್ಣಾಜಿಯೆಂಬ ಆ ಬ್ರಾಹ್ಮಣನೇ ಶಿವಾಜಿಯ ಗೂಢಚರರಲ್ಲೊಬ್ಬನು.

**ತಾ:**—ಇರಲಿ.

**ಖಂ:**—ಪತ್ರವನ್ನು ಅವನು ತಂದುದರಿಂದ ನನಗೇನೋ ಸಂದೇಹವಾಯಿತು.

**ತಾ:**—ನೇತಾಜಿನಾಯಕರ ಪತ್ರವೆಂದಲ್ಲವೇ?

**ಖಂ:**—ಅದು ಬರಿಯ ಪ್ರಣಯಪತ್ರವಲ್ಲವೆಂದು-

**ತಾ:**—ಈಗ ಸಂಶಯನಿವಾರಣೆಯಾಯಿತಷ್ಟೆ.

**ಖಂ:**—ಸಂದೇಹವು ಮತ್ತಷ್ಟು ಬಲಗೊಂಡಿತು.

**ತಾ:**—ಅಬ್ಬ!

**ಖಂ:**—ನಿನ್ನ ಕಣ್ಣಿಗೆ ಮಣ್ಣೆರಚಿ ನಿನ್ನನ್ನೆತ್ತಿಕೊಂಡು ಹೋಗುವುದು ಮಾತ್ರವಲ್ಲ, ನಮ್ಮ ಸಂಸ್ಥಾನವನ್ನು ಆಕ್ರಮಿಸುವ ಆಲೋಚನೆಯೂ ಇದೆಯೆಂದು.

**ತಾ:**—ಓಹೋ? ಇಷ್ಟೆಲ್ಲ ಪತ್ರದಿಂದ ತಿಳಿಯಿತಲ್ಲವೆ?

**ಖಂ:**—ನೀನು ಸರಳತೆಯಿಂದ ಪತ್ರವನ್ನೋದಿದರೆ ಅದರ ಮರ್ಮವನ್ನರಿಯಲಾರೆ.

**ತಾ:**—ಅಯ್ಯೋ! ನಿನ್ನ ವಕ್ರತೆ ನನ್ನಲ್ಲಿ ಹೇಗುಂಟಾಗುವುದು?

**ಖಂ:**—ಆದರೆ, ಮಾತಿನಲ್ಲಿ ವಕ್ರತೆಗೆ ಕಡಮೆಯಿಲ್ಲ.

**ತಾ:**—ಸತ್ಯವೇ ನಿನಗೆ ವಕ್ರವಾಗಿ ಕಾಣುತ್ತದೆ.

**ಖಂ:**—ನಿನಗೆ ವಕ್ರತೆಯೇ ಸತ್ಯವೆಂದು ಕಂಡಂತೆ.

**ತಾ:**—ಅನಾವಶ್ಯಕವಾಗಿ ಮಾತು ಬೆಳೆಯಿಸಿ ನನ್ನ ಮನೋವೇದನೆಯನ್ನು ಹೆಚ್ಚಿಸಬೇಡ. ಏನಾದರೂ ಕೆಲಸವಿದ್ದರೆ ಹೇಳಿ ಹೊರಟುಹೋಗು.

**ಖಂ:**—ನೇತಾಜಿಯ ಮಾತನ್ನು ಕೂಡಲೆ ನಂಬಬಾರದೆಂದು ನಾನು ಹೇಳುವುದು.

**ತಾ:**—ಆಯಿತಲ್ಲ! ಇನ್ನು ದಯೆಮಾಡಬಹುದು!

**ಖಂ:**—ಶಿವಾಜಿಯ ಕಡೆಯವರು ನಮ್ಮ ಪ್ರಾಂತ್ಯದಲ್ಲಿ ಕ್ರಾಂತಿಯನ್ನುಂಟುಮಾಡುವುದರಲ್ಲಿದ್ದಾರೆ. ಅದು ಅಸಾಧ್ಯವಾದರೆ ನಮ್ಮ ಕೋಟೆಯನ್ನು ಮುತ್ತಲೂ ಬಹುದು. ಆದುದರಿಂದ ನೀನು ಜಾಗ್ರತೆಯಿಂದಿರಬೇಕು.

**ತಾ:**—ಇವು ನಿಜವಾದರೆ ನಿನ್ನ ಮಾವನಿಗೆ ಈ ವಿಚಾರಗಳನ್ನು ತಿಳಿಸಬೇಕು. ನನಗಲ್ಲ.

**ಖಂ:**—ತಿಳಿಸದೆ ಬಂದಿಲ್ಲ. ಇಂದು ಮುಂಜಾನೆ ಸಾವಳ್ಯನನ್ನು ಕಳುಹಿಸಿಕೊಟ್ಟಿದ್ದೇನೆ.

**ತಾ:**—ಆಯಿತಲ್ಲ. ಸೇನಾನಾಯಕನೇ ನೀನು. ನಮ್ಮ ಸಂಸ್ಥಾನದ ರಕ್ಷಣೆಗೆ ಬೇಕಾದ ಸಿದ್ಧತೆಗಳನ್ನು ಮಾಡಿ ಮುಂಜಾಗ್ರತೆಯಿಂದಿರಬೇಕಾದುದು ನೀನು.

**ಖಂ:**—ಏನು ತಾರೆ? ನಾನು ಕಾರ್ಯತತ್ಪರನಾಗಿರದಿದ್ದರೆ ಇವೆಲ್ಲ ತಿಳಿದುದು ಹೇಗೆ?—ಗುಪ್ತಚರರು ಇನ್ನೊಂದು ವರ್ತಮಾನವನ್ನು ಈಗ ತಂದಿದ್ದಾರೆ.

**ತಾ:**—ಏನದು?

**ಖಂ:**—ಶಿವಾಜಿಯ ಹೇಳಿಕೆಯಂತೆ ನೇತಾಜಿಯೇ ಈ ಕಡೆ ಹೊರಟಿದ್ದಾನೆಂದು.

**ತಾ:**—ಓಹೋ! (ಆತ್ಮಗತ)—ಹೀಗೂ ಇರಬಹುದೇ?

**ಖಂ:**—ಅವನನ್ನು ನೀನು ಆಮಂತ್ರಿಸಿದುದು ಅವನ ಕೆಲಸಕ್ಕೆ ಮತ್ತಷ್ಟು ಅನುಕೂಲ.

**ತಾ:**—ಅವರೊಬ್ಬರೆ ಬಂದರೆ ಕೋಟೆಯನ್ನು ಬಗಲಲ್ಲಿಟ್ಟುಕೊಂಡು ಹೋಗಲಾರರಷ್ಟೆ?

**ಖಂ:**—ಅದೇನು ತಾರೆ? ನೇತಾಜಿಯ ವಿಷಯವನ್ನೆತ್ತಿದೊಡನೆ ನೀನು ಹೀಗೆ ಸಿಟ್ಟುಗೊಳ್ಳುವುದೇಕೆ?

**ತಾ:**—ಪಾಪ! ಕಾರಣವು ತಿಳಿದಿಲ್ಲ!

**ಖಂ:**—ನೀನು ಅವನನ್ನು ಪ್ರೀತಿಸುತ್ತೀಯೆಂದು ಬಲ್ಲೆನು. ನಾನು ನಿನ್ನನ್ನು ಪ್ರೀತಿಸುತ್ತೇನೆಂಬುದೂ ನಿಜ.—ಓಹೋ! ದ್ವೇಷದಿಂದ ನಾನು ನೇತಾಜಿಯನ್ನು ದೂರುತ್ತೇನೆಂದು ನಿನ್ನ ಭಾವನೆಯೇ? ನಾನು ಅಂತಹ ಮೂರ್ಖನಲ್ಲ. ಪ್ರೇಮಬಂಧನವಿಲ್ಲದ ವಿವಾಹಬಂಧನದಿಂದೇನು ಪ್ರಯೋಜನ? ಒಲಿಸಿದರೆ ನಿನ್ನ ಹೃದಯವನ್ನು; ಇಲ್ಲವಾದರೆ—ನೀನು ಒಲಿದವನನ್ನು ವರಿಸಬಹುದು. ತಾರೇ! ನಾನು ನಿನ್ನನ್ನು ಎಂದಾದರೂ ಬಲಾತ್ಕರಿಸುವೆನೇ? ಚಿಕ್ಕಂದಿನಿಂದ ಜತೆಯಲ್ಲಿಯೇ ಬೆಳೆದವರಾದರೂ ಆಟಪಾಟಗಳಲ್ಲಿ ಒಡನಾಡಿದವರಾದರೂ ನನ್ನ ಹೃದಯವನ್ನು ನೀನಿನ್ನೂ ತಿಳಿಯಲಿಲ್ಲವೇ?—ಅಯ್ಯೋ, ತಾರೆ! ನಿನ್ನನ್ನು ಮೋಸಗೊಳಿಸುವರೆಂಬ ಭೀತಿಯಿಂದ ನನಗೆ ತಿಳಿದ ವಿಷಯಗಳನ್ನು ಹೇಳುತ್ತೇನೆ. ಸ್ವಾರ್ಥಿಗಳಿಂದ, ಕಾರ್ಯಜಾಣರಿಂದ ನಿನಗೆ ಕೆಡುಕಾಗದಿರಲಿ ಎಂದೇ ನನ್ನ ಹಾರೈಕೆ. ನೀನು ನನ್ನ ತಂಗಿಯಲ್ಲವೇ?

**ತಾ:**—(ಥಕ್ಕನೆ ಎದ್ದು, ನಮಸ್ಕರಿಸಿ) ಅಣ್ಣಾ! ನನ್ನನ್ನು ಕ್ಷಮಿಸು! ನೀನು ತಂಗಿಯೆಂದಾಗ ನನ್ನ ಹೃದಯವು ಉಕ್ಕೇರುತ್ತದೆ; ಕಿವಿಗಾನಂದವಾಗುತ್ತದೆ. ನಿನ್ನ ದೃಷ್ಟಿಯಲ್ಲಿ ನಾನು ಅಪರಾಧಿನಿಯಲ್ಲವೇ, ಅಣ್ಣಾ! ಆದರೆ, ಆದರೆ, ನಾನೇನು ಮಾಡಲಿ?

**ಖಂ:**—ಛೇ, ಛೇ! ಅಪರಾಧವೆಲ್ಲಿ?—ನಿನ್ನ ಅಂತರಂಗವನ್ನು ತಿಳಿದುದರಿಂದಲೇ ನಿನ್ನ ವಿಡಂಬನೆಗಳನ್ನಾದರೂ ಸಹಿಸಿ ನಿನಗೆ

ನಿಜಸ್ಥಿತಿಯನ್ನು ವಿವರಿಸುವುದು. ಹೇಳಿದೆನಲ್ಲ,–ನಾನೂ ನಿನ್ನನ್ನು ಪ್ರೀತಿಸುತ್ತೇನೆ; ನನ್ನ ಪ್ರೇಮವು ಪವಿತ್ರವಾದುದು; ಅದು ಮೋಹವಿಕಾರವಲ್ಲ; ಆ ಪ್ರೇಮವು ನಿನ್ನ ರೂಪವನ್ನು, ನಿನ್ನ ತಾರುಣ್ಯವನ್ನು, ಒನಪು ಒಯ್ಯಾರಗಳನ್ನು, ನಿನ್ನ ಪದವಿಯನ್ನು ನೋಡಿ ಉದ್ರೇಕಗೊಂಡುದಲ್ಲ. ಯಾವಾಗಲೊ ಮೊಳೆತ ಪ್ರೇಮಾಂಕುರವು ಒಡನಾಟವೆಂಬ ತೇವದಿಂದ ಹುಲುಸಾಗಿ ಬೆಳೆದು ವಿಕಾಸಗೊಂಡಿದೆ. ಅದು ಬಾಡದು, ಮುರಿದುಹೋಗಲಾರದು. ಅದು ಇನ್ನೂ ಬೆಳೆಯಲಿ ಎಂದು ನನ್ನ ಬಯಕೆ.

**ತಾ:**— ಎಂತಹ ದಿವ್ಯಪ್ರೇಮ, ಅಣ್ಣಾ! ನಿನ್ನ ಅಂತರ್ಯವನ್ನು ತಿಳಿಯದೆ ನಾನು ನಿನ್ನನ್ನು ಮಾತುಗಳಿಂದ ನೋಯಿಸಿರಬಹುದು; ದೃಷ್ಟಿಯಿಂದ ತಿರಸ್ಕರಿಸಿರಬಹುದು; ನಿನ್ನ ಒಡನಾಟವನ್ನು ಉಪೇಕ್ಷಿಸಿರಬಹುದು. ನನ್ನನ್ನು ಕ್ಷಮಿಸು!–ನಿನ್ನಲ್ಲುಂಟಾದ ಆ ಪ್ರೇಮನಾದವು ನನ್ನ ಹೃದಯದಲ್ಲಿ ಪ್ರತಿನಿನಾದವನ್ನು ಉಂಟುಮಾಡಿದೆ. ಅದು ಪ್ರತಿದಿವಸವೂ ಹೆಚ್ಚಬೇಕೆಂದೇ ನನ್ನ ಆಸೆ. ಆದರೆ, ಈಗ, ಅಣ್ಣಾ! ನಿನ್ನ ಹೃದಯದಲ್ಲಿ ಸುಸ್ವರವಿಲ್ಲ, ಗರ್ಜನೆಯಿದೆ; ಅದು ನನ್ನನ್ನು ತಳಮಳಗೊಳಿಸುತ್ತಿದೆ. ಪುನಃ ಸುಸ್ವರವುಂಟಾದರೆ ನನಗೆಷ್ಟು ಆನಂದವಾದೀತು?

**ಖಂ:**— ಇದು ಬರಿಯ ಭ್ರಾಂತಿ; ಮನಸ್ಸಿನ ವಿಕಾರ.

**ತಾ:**— ಅಣ್ಣಾ! ನನ್ನ ಹೃದಯದ ತಾಪವನ್ನು ನೀನರಿಯೆ. ನನ್ನ ವರ್ತನೆಯಿಂದ ನಿನಗೆಷ್ಟು ವೇದನೆಯಾಗುತ್ತದೆಯೆಂದು ತಿಳಿದೂ ತಿಳಿದೂ ನನ್ನ ಪ್ರಣಯತಂತಿಯ ಅಲುಗಾಟವನ್ನು ನಾನು ನಿಲ್ಲಿಸಲಾರೆನು. ನನ್ನ ಚಿತ್ತವೆ ನೇತಾಜಿನಾಯಕರಲ್ಲಿ ನೆಲೆನಿಂತಿದೆ. ಅದನ್ನು ಹಿಂದಿರುಗಿಸುವ ಸ್ಥೈರ್ಯವೆನಗಿಲ್ಲ. ಎಷ್ಟೋ ಪ್ರಯತ್ನಿಸಿದೆ. ಆದರೆ, ಚಿತ್ತವೃತ್ತಿಯೇ ವಿಚಿತ್ರವಾದುದು.

**ಖಂ:**— ಆದುದರಿಂದಲೆ ನಿನ್ನಲ್ಲಿ ವಿವೇಕೋದಯವಾಗಲಿ ಎನ್ನುವುದು. ನೇತಾಜಿ ಬಲವಾಗಿ ಮೀಟಿದ ಆ ಪ್ರಣಯತಂತಿ ನಿನ್ನ ಅಂಕೆಯಲ್ಲಿ ಇಲ್ಲದಿದ್ದರೆ ಕಡಿದುಹೋಗಬಹುದು. ವಿಚಾರಿಸು.

ಮನಸ್ಸಿನ ಪ್ರವೃತ್ತಿಯನ್ನನುಸರಿಸಿ ಪ್ರೀತಿ ರೂಪಾಂತರಗೊಳ್ಳು ತ್ತದೆ.

**ತಾ:**—ನಿಜ! ನಿಜ! ನನ್ನ ಅನುಭವವೂ ಹಾಗೆಯೇ! ವ್ಯಕ್ತಿವಿಪರ್ಯಾಸದಿಂದ ಪ್ರೇಮದ ವಿವಿಧತೆಯುಂಟಾಗುತ್ತದೆ. ತಂದೆತಾಯ್ಗಳಲ್ಲಿರುವ ಪ್ರೀತಿ, ಭ್ರಾತೃಭಗಿನಿಯರಲ್ಲಿರುವ ಸಲುಗೆ, ಮಕ್ಕಳಲ್ಲಿರುವ ವಾತ್ಸಲ್ಯ, ಬಂಧುಬಳಗದವರಲ್ಲಿರುವ ಮಮತೆ, ಗುರುಹಿರಿಯರಲ್ಲಿರುವ ಭಕ್ತಿ, ಸ್ನೇಹಿತರಲ್ಲಿರುವ ಸ್ನೇಹ, ಸ್ವಜನರಲ್ಲಿರುವ ವಿಶ್ವಾಸ, ಸೇವಕರಲ್ಲಿರುವ ಕಾರುಣ್ಯ, ಅನಾಥರಲ್ಲಿರುವ ದಯೆ, ಇವೆಲ್ಲವೂ ಪ್ರೇಮದ ಬೇರೆ ಬೇರೆ ರೂಪಗಳಲ್ಲವೆ? ಹಾಗೆಯೇ ಜೀವಾವಧಿ ತನ್ನವನಾಗಿರಬೇಕೆಂಬ ಪುರುಷನ ವಿಚಾರದಲ್ಲಿಯೂ ಸ್ತ್ರೀಹೃದಯದಲ್ಲಿ ಸಹಜವಾದ ಪ್ರಣಯವುಂಟಾಗುತ್ತದೆ. ಇದೊಂದು ಹೊಸ ತೆರದ ಪ್ರೀತಿ, ಒಂದು ಹೊಸ ಭಾವನೆ, ಹೊಸ ಅನುಭವ. ನಿನ್ನ ವಿಷಯವಾಗಿ ನನ್ನಲ್ಲಿ ಅಂತಹ ಭಾವನೆಯುಂಟಾಗಲಿಲ್ಲ. ಅಣ್ಣಾ! ನನ್ನನ್ನು ಕ್ಷಮಿಸು!

**ಖಂ:**—ತಾರೇ! ಪುನಃ ಅದನ್ನೇಕೆ ಹೇಳುತ್ತೀ? ನಾನಿಂದು ಪ್ರಣಯ ಭಿಕ್ಷೆಗಾಗಿ ಬಂದಿಲ್ಲ. ನಿನ್ನನ್ನು ಎಚ್ಚರಿಸುವುದಕ್ಕೆಂದು ನಾನು ಬಂದುದು. ನನ್ನ ಕೆಲಸವಾಯಿತು. ಆದರೆ ನೀನೊಂದು ನಂಬುಗೆಯನ್ನಿತ್ತರೆ ಆನಂದದಿಂದ ಹೊರಟುಹೋಗುತ್ತೇನೆ.

**ತಾ:**—ತಂಗಿಯಲ್ಲಿ ಹೇಳಲಿಕ್ಕೂ ಸಂಕೋಚವೇ?

**ಖಂ:**—ನಿನ್ನ ಸಖಿ, ಅವಳ ಗಂಡ ಮಾರೋಜಿ ಕೂಡ ಶತ್ರುಪಕ್ಷವನ್ನು ಸೇರಿದ್ದಾರೆಂದು ನನ್ನ ಊಹೆ. ಅವರನ್ನು ನೀನು ಒಮ್ಮಿಂದೊಮ್ಮೆ ನಂಬಿ ದುಡುಕಬಾರದು.

**ತಾ:**—ಛೇ! ಅವರು ನನ್ನನ್ನು ಮೋಸಗೊಳಿಸುವುದಾದರೂ ಹೇಗೆ?

**ಖಂ:**—ಏನಾದರೂ ಸುಳ್ಳುವರ್ತಮಾನವನ್ನು ಹೇಳಿ, ಅಥವಾ ನೇತಾಜಿಯಿಂದಲೇ ಪತ್ರವನ್ನು ತಂದು ನೀನು ಕೂಡಲೆ ಅವನನ್ನು ಸೇರಬೇಕೆಂದು ಹೇಳಬಹುದು. ಅವರ ಮಾತಿಗೆ ಮರುಳಾಗ

ಬಾರದು; ನೀನು ಕೂಡಲೆ ಹೊರಟುಹೋಗಬಾರದು. ಹೋಗು ವುದಿಲ್ಲವೆಂದು ಭರವಸೆಯನ್ನಿತ್ತರೆ ನಾನೇ ಧನ್ಯನು.

**ತಾ:**—ಅಣ್ಣಾ! ಏನಿದು? ಶಾಸ್ತ್ರೋಕ್ತರೀತ್ಯಾ ವಿವಾಹವಾಗದೆ ಇರುವ ಪುರುಷನು ಪ್ರೀತಿಪಾತ್ರನಾದರೂ ಅನ್ಯನೇ ಅಲ್ಲವೆ? ತಾರೆ ಪರ ಪುರುಷನೊಡನೆ ಪರಾರಿಯಾಗುವಳೆಂದೇ ನಿನ್ನ ಶಂಕೆ?

**ಖಂ:**—ಸರಿ! ನನ್ನ ಭಾರವಿಳಿಯಿತು. ಮಾವಯ್ಯನವರು ಹಿಂದಿರುಗಿ ಬರುವವರೆಗೆ ನಿನ್ನ ರಕ್ಷಣೆ ನನ್ನ ಪಾಲಿನದಲ್ಲವೇ? ಇನ್ನು ಶಿವಾಜಿ ದೊಡ್ಡ ಸೇನೆಯನ್ನೆ ತಂದು ಕೋಟೆಯನ್ನು ಮುತ್ತಲಿ. ಈ ಖಂಡೋಜಿ ಹೆದರುವವನಲ್ಲ.—ನನ್ನ ಖಡ್ಗದ ಇದಿರು ನಿಲ್ಲುವ ವೀರನಾವನು?

**ತಾ:**—ಅಣ್ಣಾ! ನಾನೂ ನಿನ್ನ ಜತೆಯಲ್ಲಿಯೇ ಇರುತ್ತೇನೆ. ಶಸ್ತ್ರವಿದ್ಯೆ ಯಲ್ಲಿ ನಾವು ಸಹಪಾಠಿಗಳು; ಶತ್ರುಸಂಹಾರದಲ್ಲಿ ಸಹಭಾಗಿ ಗಳಾಗುವ!

**ಖಂ:**—ನನ್ನ ಆನಂದಕ್ಕೆ ಪಾರವಿಲ್ಲ. ನೀನು ಇಷ್ಟು ಸರಸವಾಗಿ ಮಾತನಾಡಿ ಎಷ್ಟೋ ದಿವಸಗಳಾದುವು, ತಾರೇ! ಆಗಲಿ— ಇನ್ನೂ ಎಷ್ಟೋ ಮಹಾಕಾರ್ಯಗಳನ್ನು ಮಾಡಲಿಕ್ಕಿದೆ. ನಾನು ಹೋಗುತ್ತೇನೆ.

**ತಾ:**—ಆದರೆ, ಅಣ್ಣಾ! (**ಆಲೋಚಿಸುತ್ತಾಳೆ.**)

**ಖಂ:**—ಏನದು? ಹೇಳಬಾರದೆ?

**ತಾ:**—ಅಲ್ಲ! (**ಲಜ್ಜೆಯಿಂದ**) ನನ್ನ ಆಮಂತ್ರಣದಂತೆ ಅವರೊಬ್ಬರೆ ಬಂದರೆ ಅವರಿಗೆ ಹಾನಿಯಾಗಬಾರದು.

**ಖಂ:**—ಛೇ! ಛೇ! ಆ ಭಯವೆಲ್ಲಿ? (**ಹೋಗುತ್ತಾನೆ.**)

**ತಾ:**—(**ಆತ್ಮಗತ**)—ನಿಜ! ನೇತಾಜಿನಾಯಕರ ವೀರತ್ವವನ್ನು ನೋಡಿ ನಾನು ಮುಗ್ಧೆಯಾದುದಲ್ಲವೇ? ಅವರ ಶೀಲಸ್ವಭಾವಗಳನ್ನೇನು ಬಲ್ಲೆನು? ನನ್ನನ್ನು ವರಿಸಿ ಈ ರಾಜ್ಯದ ಒಡೆಯನಾಗಬಹುದೆಂಬ ಆಶೆ—ದುರಾಶೆ-ಇದೆಯೋ ಏನೋ?—"ಕರ್ತವ್ಯದಿದಿರಲ್ಲಿ ಸ್ವಾ ರ್ಥಕ್ಕೆ ಸ್ಥಾನವಿಲ್ಲ" ಅಲ್ಲವೇ! ಹಾಗೆಯೇ "ಮಹತ್ವಾಕಾಂಕ್ಷೆ

ಯಿದಿರಲ್ಲಿ ಪ್ರಣಯಕ್ಕೆ ಸ್ಥಾನವಿಲ್ಲದಿದ್ದರೆ''!— ಛೀ? ಎಂತಹ ಕುಕಲ್ಪನೆಗಳು! ಆ ಹಸನ್ಮುಖವುಳ್ಳ ಪ್ರೇಮಲ ಮೂರ್ತಿಯನ್ನು ಸ್ಮರಿಸಿದಾಗ ಮನಸ್ಸಿನ ಕಳವಳವು ಸಮಾಧಾನ ಹೊಂದುತ್ತದೆ.— ಇರಲಿ—ದುಡುಕಬಾರದು.—ಹೂಂ--ಅವರಿಗೇನಾದರೂ ಅಪಾಯ ವೊದಗದಂತೆ ಎಚ್ಚರದಿಂದಿರಲಿಕ್ಕೆ ಮಾರೋಜಿಗೆ ಮುಂಜಾಗ್ರತೆ ಯನ್ನು ಹೇಳಬೇಕು.

---

## ದೃಶ್ಯ ೫

(ವಿಶಾಲಗಡ—ಸಾವಳ್ಯನ ಮನೆ.)

**ಸಾ:**—(ಆತ್ಮಗತ)—ಆಗಲಿ; ತಾರೆಯೂ ನಮ್ಮ ನಾಯಕರೂ ಒಂದಾದ ರೆಂದಾಯಿತು. ಏನಾದರೂ, ಮೊದಲು ನಮ್ಮ ರಘುನಾಥರಾಯ ರಿಗೆ ಪಟ್ಟವಲ್ಲವೇ? ಎಂದರೆ ನಮ್ಮ ವೆಂಕುವಿಗೆ ಅಧಿಕಾರ;— ಮತ್ತೇನು? ಆಗ, ಖಂಡೋಜಿ ನಾನು ಹೇಳಿದಂತೆಯೇ ಕುಣಿಯ ಬೇಕು. — ಅವನೇನೋ ಒಳ್ಳೆಯವನೆ! ಆಶೆಯೆಂಬುದು ಸಹಜ— ದುರಾಶೆಯೆನ್ನುವುದೇಕೆ? ಹಾಗೆ ಯಾವುದನ್ನು ಅಪೇಕ್ಷಿಸಿದರೂ ಅದನ್ನು ದುರಾಶೆಯೆನ್ನಬಹುದು. ನನಗಿಲ್ಲವೆ ಆಶೆ—ದೊಡ್ಡ ಜಮೀನುದಾರನಾಗಬೇಕೆಂಬ ಆಶೆ.—(ನಕ್ಕು.)

ಖಂಡೋಜಿಗೆ ತಾರೆಯಲ್ಲಿ ಆಶೆ. ಅವಳಂತಹ ರೂಪವತಿಯನ್ನು ವರಿಸಬೇಕೆಂಬುದು ವಿಚಿತ್ರವಲ್ಲ. ಪಾಪ! ಪ್ರಣಯವೆಂದರೆ ಹಾಗೆಯೇ ಇರಬೇಕು. ನನಗದರ ಅನುಭವವಿಲ್ಲ. ಆದರೆ, ನೋಡಬಾರದೇ ನಮ್ಮ ರಘುನಾಥರಾಯರನ್ನು!—ಸರಿ, ಖಂಡೋಜಿಗೆ ಸಹಾಯಮಾಡ ಬೇಕು. ಅವನು ಮದುವೆಯಾಗಲಿ ತಾರೆಯನ್ನು, ನನಗೇನು ನಷ್ಟ?— ಅದರೆ ನನಗೆ ಅಡ್ಡಕಾಲಿಟ್ಟರೆ ಮಾತ್ರ ಅವನಿಗೆ ಕೇಡು.—ಛೀ, ಹಾಗೇಕೆ ಮಾಡುತ್ತಾನೆ, ಅವನು? ನನಗೊಂದು ಜಮೀನು ಕೊಟ್ಟರೆ ಅವನಿಗೇನು ನಷ್ಟ? ಅವನಿಗೆ ಕ್ರಮೇಣ ರಾಜ್ಯವೇ ಸಿಕ್ಕುವುದಿಲ್ಲವೇ?

ಇನ್ನೇನು ವಿಶೇಷ ಕೆಲಸವೋ? ಈ ಅಪರ ರಾತ್ರಿಯಲ್ಲಿ ಹೇಳಿ ಕಳುಹಿಸಬೇಕಾದರೆ ಏನೋ ಇರಬೇಕು. ದೂರ ಪ್ರಯಾಣ ಮಾಡಲಿಕ್ಕೆ ಸಿದ್ಧನಾಗಿಯೇ ಬರಬೇಕೆಂದು ಅಪ್ಪಣೆಯಂತೆ! ನನಗೆ ಈ ಗೂಢವಿಚಾರ ಗಳೆಲ್ಲ ತಿಳಿವುದಿಲ್ಲ.—ಹೂಂ!-ನನಗೇನು? ಹೇಳಿದುದನ್ನು ಮಾಡಿದ ರಾಯಿತು. (ಹೋಗುತ್ತಾನೆ.)

---

## ದೃಶ್ಯ ೬

(ವಿಶಾಲಗಡ—ಅರಮನೆ—ಖಂಡೋಜಿಯ ಮಹಲು.
ಖಂಡೋಜಿ ಹಾಸಿಗೆಯಿಂದೆದ್ದು ಅತ್ತಿತ್ತ ತಿರುಗಾಡುತ್ತಾ, ಆತ್ಮಗತ.)

**ಖಂ:** ಅಬ್ಬ! ಹೇಗೆ ಮಲಗಿದರೂ ನಿದ್ದೆ ಬರಲೊಲ್ಲದು. ವಿಚಾರ ತರಂಗಗಳೆದ್ದು ಮನಸ್ಸನ್ನು ತಳಮಳಿಸುತ್ತಿವೆ. ಏನು? ನಿದ್ದೆ ಯಿಲ್ಲದೆ ನನ್ನ ಬುದ್ಧಿ ವಿಕಾರಗೊಂಡಿದೆಯೇ? (ತಲೆಯನ್ನು ಎರಡು ಕೈಗಳಿಂದಲೂ ಹಿಡಿದು) ಸುಖನಿದ್ರೆಯಿಂದ ಈ ವಿಚಾರಗಳನ್ನು ಮರೆಯಬಹುದಿತ್ತು. ಆದರೆ, ನಿದ್ರೆಯಿಲ್ಲ.—

ಮನೋವೇಗಕ್ಕೆ ಎಣೆಯಾದುದಿಲ್ಲ. ಅರೆಗಳಿಗೆಯಲ್ಲಿ ನನ್ನ ಚಿತ್ತವೆಷ್ಟು ಕಡೆಗಳಲ್ಲಿ ಅಲೆದಾಡಿತು; ಎಷ್ಟು ಮಹಾಕಾರ್ಯಗಳನ್ನು ಸಾಧಿಸಿತು; ನನ್ನ ಉತ್ಕರ್ಷಕ್ಕೆ ಎಷ್ಟು ಹಿತಸೂಚನೆಗಳನ್ನು ಮುಂದಿಟ್ಟಿತು! ಎಷ್ಟು ಸುಲಭದಲ್ಲಿ ಶತ್ರುಗಳನ್ನೆಲ್ಲ ಧ್ವಂಸಮಾಡಿ ನನ್ನನ್ನು ಸಿಂಹಾಸನವೇರಿಸಿತು, ತಾರೆಯನ್ನು ವಾಮಭಾಗದಲ್ಲಿ ಕುಳ್ಳಿರಿಸಿತು! ಇದೇನು ಕನಸೇ?

(ಹೊರಗೆ ನೋಡಿ) ಸುತ್ತುಮುತ್ತಲು ಭೀಕರವಾದ ಕತ್ತಲೆ ಆವರಿಸಿ ಕೊಂಡಿದೆ; ನನ್ನ ಮನಸ್ಸಿನಲ್ಲಿಯೂ ಕತ್ತಲೆಯೇ! ಆಕಾಶದಲ್ಲಿ ತೇಲಾಡುವ ಕಾರ್ಮೋಡಗಳಂತೆ ನನ್ನ ಮನಸ್ಸಿನಲ್ಲಿಯೂ ಸುಳಿದಾಡುವ ಭೀಕರ ಕೃತ್ಯಗಳ ವಿಚಾರಗಳು. ಅಲ್ಲಿ ಮಿನುಗುವ ಎರಡು ಜ್ಯೋತಿಗಳಂತೆ ನನ್ನ ಮನಸ್ಸಿನಲ್ಲಿಯೂ ಎರಡು ಹಂಚಿಕೆಗಳು.

ಆಲೋಚನೆಯೇಕೆ? ಹೀಗೆಯೇ ಮಾಡಬೇಕು. ಇಲ್ಲದಿದ್ದರೆ ನನ್ನ ಆಶಾಪೂರ್ತಿಯಾಗುವುದೆಂತು?—ಸಾವಳ್ಯನನ್ನು ನಂಬಬಹುದೇ? ಗುಟ್ಟು ಬಯಲಾದರೆ?-(ಆಲೋಚಿಸಿ) ಪಾಪ! ಅವನು ಹೇಳಿದಂತೆ ಮಾಡುವವನು. ಅವನಲ್ಲಿ ವಿಚಾರವಿಲ್ಲ.—ಅಲ್ಲದೆ ಗತ್ಯಂತರವಿಲ್ಲ. (ಸದ್ದಾಗುವುದು) ಹಾ! ಸಾವಳ್ಯನೇ ಇರಬೇಕು. ಸಕಾಲದಲ್ಲಿ ಬಂದನು. ಕಾರ್ಯವು ನೆರವೇರುವುದೆಂಬುದಕ್ಕೆ ಇದೇ ಶುಭಚಿಹ್ನೆ. (ಬಾಗಿಲು ತೆರೆದು)—ಹಾಗೀಗ! ಸ್ವಾಮಿನಿಷ್ಠ ಸೇವಕನೆಂದರೆ ನೀನೇ! ಏನು? ಪ್ರಯಾಣಕ್ಕೆ ಸಿದ್ಧನಾಗಿದ್ದೀಯಷ್ಟೆ!

**ಸಾ:**—ಅಪ್ಪಣೆಯಂತೆ ಬಂದಿದ್ದೇನೆ.

**ಖಂ:**—ಸರಿ! ಈಗಲೆ ಹೊರಡು. ಮುಂಜಾವವಾಗುತ್ತ ಬಂತು. ನೀನು ಹೋದ ವಿಚಾರವು ಯಾರಿಗೂ ತಿಳಿಯಬಾರದು.

**ಸಾ:**—ಅಪ್ಪಣೆ.

**ಖಂ:**—ಕಾರ್ಯವೇನೋ ಗಹನವಾದುದು; ನನ್ನ ಆಪ್ತನಾದುದರಿಂದ ನಿನ್ನನ್ನು ನಿಯಮಿಸುತ್ತೇನೆ.

**ಸಾ:**—ಸರಿ! ಮಿತ್ರನನ್ನು ಪರೀಕ್ಷಿಸಿದಂತಾಗುವುದು.

**ಖಂ:**—(ಹತ್ತಿರ ಕರೆದು ಗುಟ್ಟಿನಲ್ಲಿ ಹೇಳುತ್ತಾನೆ) ಏನು? ಬೆರಗಾದೆಯಲ್ಲ! ನಿನ್ನಿಂದ ಈ ಮಹಾಕಾರ್ಯವು ಸಾಧ್ಯವಾಗದೇ?

**ಸಾ:**—ಹಾಗಲ್ಲ! ಇದೇನೋ ಭಯಂಕರವಾದ ಕೃತ್ಯವಲ್ಲವೇ?

**ಖಂ:**—ಆದುದರಿಂದ ಸುಮ್ಮನಿರುವುದೇ?

**ಸಾ:**—ವಿಪತ್ತಿದೆಯಲ್ಲ ಎಂದು ಸ್ವಲ್ಪ ಸಂದೇಹ.

**ಖಂ:**—ಛೇ! ವಿಪತ್ತೆಲ್ಲಿ? ಸ್ವಲ್ಪ ಜಾಗ್ರತೆಯಿಂದಿದ್ದರೆ ಕೆಲಸವು ಸುಲಭಸಾಧ್ಯವೇ!

**ಸಾ:**—ಆಗಲಿ--ಪ್ರಯತ್ನಿಸುತ್ತೇನೆ.

**ಖಂ:**—ಕೃತಕಾರ್ಯನಾಗಿ ಬಾ.—ಇಗೋ! ನನ್ನ ಪಾರಿತೋಷಕ. (ತನ್ನ ಹಾರವನ್ನು ತೆಗೆದು ಅವನ ಕೊರಳಲ್ಲಿ ಹಾಕುತ್ತಾನೆ.)

**ಸಾ:**—ಹಾ! ಇದೇಕೆ? ನಿಮ್ಮ ಸೇವಕನಲ್ಲವೇ ನಾನು?

**ಖಂ:**—ಇಷ್ಟೇ ಅಲ್ಲ; ಸಾವಳ್ಯ! ಕೆಲಸವನ್ನು ತೀರಿಸು; ಆಮೇಲೆ . . .

**ಸಾ:—** ಕೆಲಸವಾದಂತೆಯೇ; ಭಯುವನ್ನು ಬದಿಗೊತ್ತಿಯಾಯಿತು.

**ಖಂ:**—ಸರಿ! ಮೂರೇ ದಿವಸಗಳು. ಈ ಅವಧಿಯಲ್ಲಿ ಕೆಲಸವನ್ನು ಸಾಧಿಸಿ ನೀನು ಹಿಂದಿರುಗಬೇಕು. ಜೋಕೆ! (ಸಾವಳ್ಯಸು ನಮಸ್ಕರಿಸಿ ಹೋಗುತ್ತಾನೆ.)

**ಖಂ:**—(ಆತ್ಮಗತ) ಉಹೂ! ಇವನಲ್ಲಿ ವಿಚಾರವುಂಟಾಯಿತೇ? ಇರಲಿ; ದೋಷವೇನು? ಕೆಲಸವನ್ನು ಸಾಧಿಸಿದರೆ ಸರಿ. ಇಲ್ಲದಿದ್ದರೆ ನನಗೇನು ಬಾಧೆ? ಇನ್ನೊಂದು ದಾರಿಯನ್ನು ಹಿಡಿದರೆ ಸರಿ. ಇದ್ದಾರಲ್ಲ, ಮೂರ್ಖಶಿಖಾಮಣಿ, ನನ್ನ ಮಾವಯ್ಯನವರು. ಅವರನ್ನು ಸ್ವಲ್ಪ ಪ್ರೋತ್ಸಾಹಿಸಿದರೆ ಎಂತಹ ಕೆಲಸವನ್ನೂ ಮಾಡುವರು. ಹೇಗೂ ಹಿಡಿದ ಕೆಲಸವನ್ನು ಕೊನೆಗಾಣಿಸಲೇ ಬೇಕು.

---

## ದೃಶ್ಯ ೭

(ವಿಶಾಲಗಡ; ಅರಮನೆ; ಅಂತಃಪುರದ ಹಿಂದಿನ ತೋಟ. ನೇತಾಜಿ ಹಿಂಭಾಗದ ಬಾಗಿಲಿನಿಂದ ಪ್ರವೇಶಿಸಿ.)

**ನೇತಾಜಿ:—**(ಆತ್ಮಗತ) ನಾನು ಎಂತಹ ಅಚಾತುರ್ಯದ ಕೆಲಸವನ್ನು ಮಾಡಿದೆನು? ಚಂದ್ರರಾಯರಿಲ್ಲದಿದ್ದರೆ ಖಂಡೋಜಿಯಿಲ್ಲವೇ? ಪತ್ರದ ವಿಚಾರವನ್ನಂತೂ ಮಾರೋಜಿಯಿಂದ ಕೇಳಿದಂದಿನಿಂದ ನನ್ನ ಮನಸ್ಸೆ ಚಂಚಲವಾಗಿದೆ. ಅಲ್ಲದೆ ತಾರೆಯೇ ಮಾರೋಜಿಯನ್ನು ಎಚ್ಚರಿಸಿದ್ದಾಳಂತೆ! ನಾನು ಈ ಪ್ರಾಂತ್ಯದಲ್ಲಿರುವುದೇ ವಿಪತ್ತಿಗೆ ಕಾರಣವು—

ವೀರನು ಪ್ರಣಯಪಾಶದಲ್ಲಿ ಸಿಕ್ಕಿ ಕರ್ತವ್ಯವನ್ನು ಮರೆತು ಹೀಗೂ ವರ್ತಿಸುವುದೇ? ಮಹಾರಾಜರಿಗೂ ತಿಳಿಸದೆ ನನ್ನ ಕುದುರೆಯನ್ನೇರಿ ಹೊರಟುಬಂದೆನಲ್ಲ! ನನ್ನಲ್ಲಿಯೂ ದ್ರೋಹಾಚರಣೆಯನ್ನು ಕಲ್ಪಿಸಿದರೆ? ಯುದ್ಧಕಾಲವಲ್ಲದಿದ್ದರೂ ಮಹಾರಾಜರೇ ಒಮ್ಮೆಯೇ ನನ್ನನ್ನು ಕರೆ

ಕಳುಹಿಸಿದರೆ! ನಾನಿಲ್ಲವೆಂಬುದನ್ನು ತಿಳಿದು ರಾಜರು ಸಿಟ್ಟುಗೊಂಡರೆ! ಎಂತಹ ಅವಿವೇಕಿ, ನಾನು?

ತಾರೆಯನ್ನು ನೋಡಿ ಮಾತನಾಡಿ ಇಲ್ಲಿಂದಲೇ ಪುರಂದರಕ್ಕೆ ಹೊರಟುಹೋಗಬೇಕು. ಏನು? ಇನ್ನು ಐವತ್ತು ಮೈಲುಗಳನ್ನು ನನ್ನ 'ಕಂಕು' ಒಂದು ಜಾವದೊಳಗೆ ಓಡುವುದಿಲ್ಲವೇ?

ತಾರೆಯಲ್ಲಿ ಮಾತನಾಡುವುದಾದರೂ ಏನನ್ನು? ನಾನು ಮಾಡಿದ ಕೆಲಸಕ್ಕೋಸ್ಕರ ಅವಳು ನನ್ನನ್ನು ಜರೆದರೆ! ಅವಳ ದೃಷ್ಟಿಯಲ್ಲಿ ನಾನು ಮಾಡಿದುದು ಮಹಾಪರಾಧವಲ್ಲವೆ? (ಒಂದು ಗುಲಾಬಿಯ ಹೂವನ್ನು ಕೊಯ್ಯುತ್ತಿರುವಾಗ)

**ತಾರೆ:**—(ಪ್ರವೇಶಿಸಿ; ಆತ್ಮಗತ) ಹೇಳಿದ ಸಮಯವು ಮೀರಿಹೋಯಿತು.— ಹೋ! ಅಲ್ಲಿ ಯಾರೋ ಬಂದಂತಿದೆ! ಮನವೇ ಸ್ಥೈರಿಸು!- ಎಷ್ಟೋ ವಿಚಾರಗಳನ್ನು ಕೇಳಬೇಕೆಂದಿದ್ದೆ. ಎಲ್ಲವೂ ಮರೆತು ಹೋದುವು. ಏನೆಂದು ಮಾತನಾಡಲಿ? ಬೇರಾರೂ ಅಲ್ಲವಷ್ಟೆ ಅದು! ಛೆ! ಆ ಕಣ್ಣುಗಳು ಕತ್ತಲಲ್ಲಾದರೂ ಹೇಗೆ ಪ್ರಕಾಶಿಸುತ್ತಿವೆ? ಎತ್ತರಕ್ಕೆ ತಕ್ಕ ತೋರ, ಆ ವಿಶಾಲವಾದ ಹಣೆ, ಆ ಮೈಕಟ್ಟು-ಇನ್ನಾರಲ್ಲಿರುವುವು? ನೆಳಲಿಂದಲೂ ನಾನು ಅವರನ್ನು ಗುರುತಿಸಬಲ್ಲೆನು. ಹೇಗೆ ಮಾತನ್ನು ಆರಂಭಿಸಲಿ?—ಹೂಂ!—

(ಪ್ರಕಾಶ) ಈ ಹೊತ್ತೆ ಚೆಂದವಾಗಿ ಅರಳಿದ್ದ ಗುಲಾಬಿ—ಈ ಗಿಡದಲ್ಲಿಯೇ ಇತ್ತು. ಈಗೆಲ್ಲಿ?

**ನೇ:**—ಗುಲಾಬಿಯೋ? ಅದು ಕಂಟಕ ಮಧ್ಯದಿಂದ ಪಾರಾಗಿದೆ.

**ತಾ:**—ಕಂಟಕ ಮಧ್ಯದಲ್ಲಿಯೇ ವಿಕಾಸಗೊಳ್ಳುವುದು ಅದರ ಸ್ವಭಾವವಷ್ಟೆ!

**ನೇ:**—ಆಮೇಲಾದರೂ ಅದರ ಮಧ್ಯದಿಂದ ಪಾರಾಗಲಿಯೆಂದು ಪ್ರಕೃತಿ ದೇವಿಯ ಬಯಕೆ.

**ತಾ:**—ಅದರ ಕೋಮಲತೆಯನ್ನು ತಿಳಿಯದವರ ಕೈಗಲ್ಲವೆ?

**ನೇ:**—ಅದರ ಕೋಮಲತೆಗೆ ತಕ್ಕ ಸ್ಥಾನದಲ್ಲಿಡುವವನ ಕೈಗೆ.

**ತಾ:**—ಹಾಗಾದರೆ, ಅದು ಯೋಗ್ಯಸ್ಥಾನವನ್ನು ಸೇರಿದೆಯೇ?

**ನೇ:**—ಓಹೋ! ಈಗಲೇ ಸೇರುತ್ತದೆ.—ತಾರೇ! ಇದನ್ನು ಸ್ವೀಕರಿಸು.

**ತಾ:** —ನಾನೇ? ನೀವು ಕೊಯ್ದ ಹೂವನ್ನು ನಾನೇಕೆ ತೆಗೆದುಕೊಳ್ಳಲಿ?

**ನೇ:**— ಅದಕ್ಕೆ ತಕ್ಕ ಸ್ಥಾನವು ನಿನ್ನ ಮುಡಿಯೇ? (ಎಂದು ಮುಡಿಸುವನು.)

**ತಾ:**—(ಲಜ್ಜೆಯಿಂದ ತಲೆವಾಗಿ) ನಿಮಗೆ ಪ್ರತಿಯಾಗಿ ನಾನೇನನ್ನು ಕೊಡಲಿ?

**ನೇ:**— ನಿನ್ನನ್ನೆ; ಮತ್ತೇನು? (ತಾರೆ ಲಜ್ಜೆಯಿಂದ ನಮುಸ್ಕರಿಸುವಳು. ನೇತಾಜಿ ಅವಳ ಕೈಹಿಡಿದೆಬ್ಬಿಸಿ)

**ನೇ:**—ತಾರೆ! ನಾನೆಂತಹ ಅಪರಾಧಿಯೆಂಬುದನ್ನು ಬಲ್ಲೆಯಷ್ಟೆ! ಇನ್ನೂ ನೀನು ನನ್ನನ್ನು ಪ್ರೀತಿಸುತ್ತೀಯಾ?

**ತಾ:**—ನನ್ನ ಹೃದಯದಲ್ಲಿ ಮನೆಮಾಡಿದ ಮೂರ್ತಿಯನ್ನು ತೆಗೆದೊಗೆಯಲು ಸಾಧ್ಯವೇ?

**ನೇ:**—ವಿಚಾರಿಸು! ಈ ಪ್ರೇಮದ ಪರಿಣಾಮವೇನೆಂದು ಬಲ್ಲೆಯಾ?

**ತಾ:**—ಓಹೋ! ಇದರ ಪರಿಣಾಮವು ಮನಶ್ಶಾಂತಿ.

**ನೇ:**—ತಾರೆ! ಈ ಶಾಂತಿ ಎಷ್ಟು ಕಾಲ? ಮನಃಪೂರ್ವಕವಾಗಿ ಬಯಸಿದ ವಸ್ತು ನಮಗೆ ಸಿಕ್ಕದಿದ್ದರೆ ಅದರಿಂದಾಗುವುದು ವ್ಯಸನ; ಅಸಹನೀಯವಾದ ದುಃಖ.

**ತಾ:**—ಅದೇನು? ಅಷ್ಟು ಬೇಗನೆ-ನೀವು-ನನ್ನನ್ನು ಮರೆತಿರಾ? ದೃಷ್ಟಿಯಿಂದ ದೂರವಾದುದು ಹೃದಯದಿಂದಲೂ ದೂರವಾಯಿತೇ?

**ನೇ:**—ನಿನ್ನನ್ನು ಹೇಗೆ ಮರೆಯಲಿ ತಾರೆ?

**ತಾ:**—ಹಾಗಾದರೆ ನನ್ನ ಬಯಕೆಯಂತಾಗುವುದು.

**ನೇ:**—ಯಾವಾಗ? ನಮ್ಮ ಮಧ್ಯದಲ್ಲಿ ರಾಗದ್ವೇಷಗಳ ದೊಡ್ಡ ಗೋಡೆಯೇ ಮೇಲೇರುತ್ತಿದೆಯಷ್ಟೆ?

**ತಾ:**—ಪ್ರಣಯವು ಅದನ್ನು ಕೊರೆದುಹೋಗಲು ಸಮರ್ಥವಾದುದು!

**ನೇ:**—ಆದರೆ, ವಿಯೋಗವು ಎಷ್ಟುಕಾಲ ಸಹನೀಯವಾಗಬಹುದು?

**ತಾ:**—ಸಮಾಗಮವಾಗುವ ವರೆಗೆ.

**ನೇ:**—ಆ ಸ್ಥಿರತೆಯಿದೆಯೇ?

**ತಾ:**—ಇಲ್ಲದೇನು? ನನ್ನ ಹೃದಯದಲ್ಲಿ ನೆಲಸಿರುವ ಈ ದಿವ್ಯಮೂರ್ತಿಯನ್ನು ನನ್ನ ಜ್ಞಾನಚಕ್ಷುಗಳಿಂದ ನೋಡಿ ಆನಂದಗೊಳ್ಳುವೆನು.

**ನೇ:**—ತಾರೆ! ತಂದೆಯಲ್ಲಿರಬೇಕಾದ ಭಕ್ತಿವಿಶ್ವಾಸ, ಬಂಧುವಿನಲ್ಲಿರಬೇಕಾದ ಮಮತೆ ಇವುಗಳನ್ನು ಬದಿಗೊತ್ತಿ ನಿನ್ನ ಪ್ರಣಯವನ್ನು ಬೆಳೆಯಿಸುವ ಕಾಲವು ಬಂದಿರುವುದು. ಮಿಂಚಿನಂತೆ ಏನೋ ಒಮ್ಮೆ ಹೊಳೆದುದನ್ನೆ ದಿವ್ಯಜ್ಯೋತಿಯೆಂದೆಣಿಸಿ ಮೋಸ ಹೋಗಬೇಡ. ನಿನ್ನ ಅಂತರಾತ್ಮವನ್ನು ವಿಚಾರಿಸಿಕೋ? ನನ್ನನ್ನು ಮರೆತುಬಿಟ್ಟು ಬೇರೆಯುವರನ್ನು ವರಿಸಿ ಸುಖದಲ್ಲಿರಬಹುದು.

**ತಾ:**—ಈ ನಿಷ್ಠುರಮಾತುಗಳೇ ನಿಮ್ಮ ಬಾಯಿಂದ?

**ನೇ:**—ಹಾಗಲ್ಲ, ತಾರೇ! ನಿನ್ನ ಪ್ರೇಮವು ನಿಶ್ಚಲವಾದರೆ ನಾನು ಕೃತಾರ್ಥನಾಗುವೆನು. ಆದರೆ ನನ್ನ ಹಿತದೃಷ್ಟಿಯಿಂದ, ನಿನಗೆ ದುಃಖವುಂಟಾಗಬಾರದೆಂದೇ ಈ ಮಾತುಗಳನ್ನಾಡಿದೆನು. ಈ ಮೊದಲೆ ನಾವು ಬೇರೆ ಬೇರೆ ದೋಣಿಗಳನ್ನೇರಿಯಾಯಿತು. ಇನ್ನು ಸೆಳೆತದಲ್ಲಿ ಸಿಕ್ಕಿಬಿದ್ದು ಅವು ಯಾವಾವ ಕಡೆಗೆ ಹೋಗುವುವೆಂದು ತಿಳಿಯಲಾರೆವು; ಅವು ಜತೆಯಲ್ಲಿಯೇ ಇರುವುದಂತೂ ಅಸಾಧ್ಯ. ಯಾವುದಾದರೂ ಒಂದು ಅಥವಾ ಎರಡೂ ಮುಳುಗಬಹುದು.

**ತಾ:**—ಏಕೋ? ಎರಡು ದೋಣಿಗಳೂ ಜತೆಯಲ್ಲಿರಲಿಕ್ಕೆ ಸಾಧ್ಯವಿದೆ. ನನ್ನ ತಂದೆಯುವರ ಸ್ವಭಾವವನ್ನು ನೀವು ಚೆನ್ನಾಗಿ ತಿಳಿದಿಲ್ಲ. ಅವರೂ ಸ್ವದೇಶಾಭಿಮಾನಿಗಳು; ಅದಕ್ಕಿಂತಲೂ ಆತ್ಮಾಭಿಮಾನಿಗಳು. ಪ್ರಜೆಗಳ ಈಗಣ ದುಃಸ್ಥಿತಿಯನ್ನು ತಿಳಿಸಿ ಸ್ವರಾಜ್ಯಸ್ಥಾಪನೆಯ ಮಹೋದ್ದೇಶವನ್ನು ಅವರಿಗೆ ಮುಂದಟ್ಟುಮಾಡಿದರೆ ಅವರು ಇನ್ನೂ ಮಹಾರಾಜರ ಪಕ್ಷವನ್ನೆ ವಹಿಸಬಹುದು.

**ನೇ:**—(ನಕ್ಕು) ದುಷ್ಟರ ಹೃದಯದ ಆಳವನ್ನು ನೀನು ತಿಳಿದಿಲ್ಲ.

**ತಾ:**—ಅದೇಕೋ? ನಡೆವವರು ಎಡವುವುದು ಸಹಜವಲ್ಲವೇ?

**ನೇ:**—ಇದು ಎಡವಿದ್ದಲ್ಲ; ಒದೆದದ್ದು—ಅವರವರ ಕರ್ಮಕ್ಕೆ ತಕ್ಕ ಫಲವನ್ನು ಅವರವರು ಅನುಭವಿಸುವರು.

**ತಾ:**—ಇದು,–ಬೇರೆಯುವರಿಗೆ ಬೋಧಿಸುವ ತತ್ವ!

**ನೇ:**– ಅಲ್ಲ; ಆಚರಣೆಯಲ್ಲಿಯೂ ಇದೆ.

**ತಾ:**—ಹಾಗಾದರೆ, ನಿಮ್ಮ ಮಹಾರಾಜರು ನನ್ನ ತಂದೆಗೆ "ತಕ್ಕ ಶಾಸ್ತಿ" ಮಾಡುತ್ತೇನೆಂದುದೇಕೋ?

**ನೇ:**—"ಸತ್ಯಕ್ಕೆ ಚ್ಯುತಿಯಿಲ್ಲ"ವೆಂಬ ದೃಢ ವಿಶ್ವಾಸವವರದು. ವಿಶ್ವಾಸ ಘಾತಕಿಗಳಾದ ಚಂದ್ರರಾಯರನ್ನು ಅವರು ಶಿಕ್ಷಿಸಲಿಲ್ಲ; ತಿರಸ್ಕರಿಸಿದರು.

**ತಾ:**—ಏನೇ ಇರಲಿ. ತಂದೆಯವರ ಮನಸ್ಸು ರಾಜರ ಕಡೆಗೆ ಒಲಿವಂತೆ ನಾನು ಪ್ರಯತ್ನಿಸುತ್ತೇನೆ.

**ನೇ:**—ಅದು ನಿಷ್ಫಲವಾದರೆ—

**ತಾ:**—ಆದರೂ . . .

**ನೇ:**—ಏನು ತಡೆ? ಹೇಳಿಬಿಡು.

**ತಾ:**—ನನ್ನ ಮನಸ್ಸು ಚಂಚಲವಾಗದು.

**ನೇ:**—ತಾರೆ! ಹಾಗಾದರೆ ನಾನೇ ಧನ್ಯನು. ಇಗೋ! ಆ ಚಂದ್ರ ಸಾಕ್ಷಿಯಾಗಿ ನಾನು ನಿನ್ನನ್ನು ವರಿಸಿದೆನು. (ತನ್ನ ಕೊರಳಲ್ಲಿದ್ದ ಹಾರವನ್ನು ಅವಳ ಕೊರಳಲ್ಲಿ ಹಾಕುತ್ತಾನೆ.)

**ತಾ:**—(ಚಕಿತಳಾಗಿ ನಿಲ್ಲುತ್ತಾಳೆ.)

**ನೇ:**—ಇದೇನು ತಾರೆ? ಸಂದೇಹವೇನು? . . .

**ತಾ:**—ಏನೋ? ನನ್ನ ಭ್ರಮೆ . . .

**ನೇ:**—ಆಗಲಿ; ನಾನು ಕೇಳಬಾರದ ವಿಷಯವೆ ಅದು?

**ತಾ:**—ಏನಿಲ್ಲ? ಸ್ತ್ರೀ ಸಹಜವಾದ ಶುಭಾಶುಭದ ಆಲೋಚನೆ.

**ನೇ:** - ಅಶುಭವೆಲ್ಲಿಯದು? ಹೇಳಿಬಿಡು.

**ತಾ:**— ನಾನೇಕೆ ನಿಮ್ಮ ಮನಸ್ಸನ್ನು ನೋಯಿಸಲಿ?

**ನೇ:**—ನೀನು ಹೇಳದಿದ್ದರೆ ನನಗೆ ಮನೋವೇದನೆಯಿಲ್ಲವೇ? ಹೇ ತಾರೆ! ಇನ್ನುಮುಂದೆ ನಾವು ಸುಖದುಃಖಗಳಲ್ಲಿ ಸಹಭಾಗಿಗಳಲ್ಲವೇ?

**ತಾ:**—ಏನೋ? ನೀವು ವೃದ್ಧಿಕ್ಷಯವನ್ನು ಹೊಂದುವ ಚಂದ್ರನನ್ನೆ ಸಾಕ್ಷಿಯಾಗಿಟ್ಟಿರೆಂದು!

**ನೇ:**—ಈಗ ಇಲ್ಲಿಲ್ಲದಿರುವ ಅಗ್ನಿ ಅಥವಾ ಸೂರ್ಯರಿಗಿಂತ ನಮ್ಮ ಕಣ್ಣಿಗೆ ಕಾಣಿಸುವ, ನಮಗೀಗ ಆನಂದವನ್ನುಂಟುಮಾಡುವ

ಚಂದ್ರನೇ ಮೇಲೆಂದು ಹಾಗೆ ಹೇಳಿದೆನು. ಅಲ್ಲದೆ ಕ್ಷಯಿಸಿದ ಚಂದ್ರನಾದರೂ ವೃದ್ಧಿಗೊಳ್ಳುತ್ತಾನಲ್ಲವೇ?

**ತಾ:**—ಆದರೆ,–ನಮ್ಮ ಪ್ರೇಮದಲ್ಲಿ ಮಾತ್ರ ವೃದ್ಧಿಕ್ಷಯಗಳಾಗ ಬಾರದು.

**ನೇ:**—ತಾರೇ! ಹೃದಯವನ್ನು ಹೃದಯದಲ್ಲಿ ಎರಕಹೊಯ್ದು ಉಂಟಾದ ನಮ್ಮ ಪ್ರಣಯವು ಚಂದ್ರಗೋಲದಂತೆಯೇ ಸದಾ ಏಕರೀತಿಯ ಲ್ಲಿಯೇ ಇರುವುದು. ಸ್ಥಾನಕಾಲಮಾನದಿಂದ ಆ ಗೋಲದಲ್ಲಿ ವ್ಯತ್ಯಾಸವಾದಂತೆ ಕಂಡರೂ ಅದು ನಿಜವಲ್ಲ.

**ತಾ:**—ಸರಿ! ಸರಿ!

**ನೇ:**—ಇನ್ನೊಂದು ವಿಚಾರ–ನನ್ನ ಜತೆಯಲ್ಲಿ ಬರಲಪೇಕ್ಷೆಯೇ ನಿನಗೆ?

**ತಾ:**—ನನ್ನ ಹೃದಯವನ್ನೇನೋ ಅರ್ಪಿಸಿದ್ದೇನೆ ನಿಮಗೆ. ಆದರೆ.—

**ನೇ:**—ತಿಳಿಯಿತು. ನಾನು ಒತ್ತಾಯಿಸುವುದಿಲ್ಲ. ಹಾಗಾದರೆ ನನಗೆ ಅನುಮತಿಯನ್ನು ಕೊಡು. ನಾನು ಹೋಗುತ್ತೇನೆ.

**ತಾ:**—ಈ ರಾತ್ರಿಯಲ್ಲಿ! ಎಲ್ಲಿಗೆ?

**ನೇ:** –ನಾನು ಈಗಲೆ ಪುರಂದರಗಡಕ್ಕೆ ಹೋಗಬೇಕು.

**ತಾ:**—ಅಷ್ಟು ಅವಸರದ ಕಾರ್ಯವೇನೋ?

**ನೇ:**—ನಿನ್ನ ಅಪೇಕ್ಷೆಯಂತೆ, ಬರಬಾರದ ಸ್ಥಾನಕ್ಕೆ ಬಂದಿದ್ದೇನಷ್ಟೆ– ಆದುದರಿಂದ . . .

**ತಾ:**—ಹಾಗೆಂದರೆ?

**ನೇ:**—ಶತ್ರುಗಳ ಮಧ್ಯದಲ್ಲಿ ಏಕಾಕಿಯಾಗಿ ತಿರುಗುವುದು ಧರ್ಮ ವಲ್ಲ.

**ತಾ:**—ಶತ್ರುಗಳೆಲ್ಲಿ ?—ನಾನೂ ನಿಮ್ಮ ಶತ್ರುವೆ?

**ನೇ:**—ನೀನಲ್ಲ—ಆದರೆ ಬೇರೆಯವರು–ನನ್ನನ್ನು ದ್ವೇಷಿಸುವವರೂ ಇಲ್ಲಿದ್ದಾರಲ್ಲವೆ, ತಾರೆ?

**ತಾ:** –ಓಹೋ! ಈಗ ನನ್ನ ಅಧಿಕಾರವು ಇಲ್ಲಿ. ನಿಮಗೇನೂ ಭಯವಿಲ್ಲ.

**ನೇ:**—ಭಯವೆಲ್ಲಿಯದು? ನಾನೂ ಬರಿಗೈಯಲ್ಲಿ ಬಂದಿಲ್ಲ. (ಖಡ್ಗವನ್ನು ತೋರಿಸುತ್ತಾನೆ.) ಆದರೆ, ತಿಳಿದೂ ತಿಳಿದೂ ಅಪಾಯಕ್ಕೆ ತಲೆಯೊಡ್ಡುವುದೇ?–ಅದೂ ಅನಾವಶ್ಯಕವಾಗಿ?

**ತಾ:**—(ಲಜ್ಜೆಯಿಂದ) ಹಾಗೆಮಾಡುವುದು ವೀರರ ಲಕ್ಷಣವಲ್ಲವೇ?

**ನೇ:**—ಆದರೆ, ವಿವೇಕಿಗಳದಲ್ಲ!

**ತಾ:**—ಹಾಗೆಂದರೆ, ವೀರತ್ವವೂ ವಿವೇಕವೂ ಏಕತ್ರವಿರಲಾರವು!

**ನೇ:**—ವಿವೇಕವಿಲ್ಲದವನು ಎಂದೂ ವೀರನೆನ್ನಿಸಿಕೊಳ್ಳಲಾರನು.

**ತಾ:**—(ಮುಗುಳುನಗೆಯಿಂದ) ಹಾಗಾದರೆ, ನೀವು ಬಂದುದೇಕೆ?

**ನೇ:**—ನಿನ್ನ ಬಯಕೆಯನ್ನು ಪೂರೈಸುವುದಕ್ಕೋಸ್ಕರ; ವಿಷಮಪರಿಸ್ಥಿತಿಯನ್ನು ನಿನಗೆ ತಿಳಿಸುವುದಕ್ಕೋಸ್ಕರ.

**ತಾ:**—(ಆಲೋಚಿಸುತ್ತ) (ಬೆರಳಲ್ಲಿದ್ದ ಉಂಗುರವನ್ನು ತೆಗೆದು ನೋಡುತ್ತ) ನಿಮ್ಮ ಉಪಕಾರಕ್ಕೆ ಪ್ರತ್ಯುಪಕಾರವನ್ನೇನು ಮಾಡಲಿ? ನನ್ನನ್ನೆ ಈ ಮೊದಲು ನಿಮಗೆ ಸಮರ್ಪಿಸಿಯಾಗಿದೆ. ಈ ಉಂಗುರವು—ನನ್ನ ತಾಯಿ ನನಗೆ ಕೊಟ್ಟುದು. ಇದನ್ನು ಈಗ ಅರ್ಪಿಸುತ್ತೇನೆ. ಈ ದಾಸಿಯ ಸ್ಮರಣೆಯಾಗುವಂತೆ ಇದು ಸದಾ ತಮ್ಮ ಬೆರಳಲ್ಲಿಯೇ ಇರಲಿ ಎಂದು ನನ್ನ ಪ್ರಾರ್ಥನೆ. (ಎಂದು ಬೆರಳಲ್ಲಿಡುವಳು.)

**ನೇ:**—ತಾರೇ! ನನ್ನಲ್ಲಿ ಪ್ರಾಣವಾಯುವಿನ ಸಂಚಾರವಿರುವವರೆಗೆ ಇದು ನನ್ನ ಕೈಬಿಟ್ಟುಹೋಗದು. ನಿನ್ನ ದಿವ್ಯಮೂರ್ತಿ ನನ್ನ ಹೃದಯದಿಂದ ಮಾಸಿಹೋಗದು, ಪ್ರಿಯೇ! ನಂಬಿರು.

**ತಾ:**—ಕೃತಾರ್ಥಳಾದೆನು. ಇನ್ನು . . . (ಅಳುವಳು.)

**ನೇ:**—(ಅವಳ ಕೈಹಿಡಿದು) ಪ್ರಿಯೇ! ದೈವೇಚ್ಛೆಯಿಲ್ಲದೆ ಯಾವ ಕೆಲಸವೂ ಸಾಗದು. ಅಂಬಾಭವಾನಿಯ ಕೃಪೆಯಿಂದ ನಮ್ಮ ಸಮಾಗಮವು ಬೇಗನೆ ಆಗುವುದು. ಹೆದರಬೇಡ.

**ತಾ:**—ಹಾಗಾಗಲಿ ಎಂದು ನಾನು ದೇವಿಯನ್ನು ಸದಾ ಪ್ರಾರ್ಥಿಸುವೆನು.

**ನೇ:**—ತಾರೇ! ಇನ್ನೊಂದು ಮಾತು.

**ತಾ:**—ಏನಪ್ಪಣೆ?

**ನೇ:**—ನನ್ನ ವಿಷಯವಾಗಿ ಏನಾದರೂ ಅಪವಾದವನ್ನು ಕೇಳಿದರೆ ಅದನ್ನು ವಿಚಾರಿಸದೆ ಫಕ್ಕನೆ ನಂಬಬೇಡ, ಕಂಡೆಯಾ!

**ತಾ.**—ಹೀಗೂ ಒಂದು ಸಂಶಯವೇ?

**ನೇ:**—ಅಲ್ಲ; ಮುಂಜಾಗ್ರತೆಯಾಗಿ ಹೇಳಿದೆನಷ್ಟೆ! ದ್ವೇಷಾಸೂಯೆಗಳಿಂದ ಎಂತಹ ವಿಪತ್ತುಗಳೊದಗುತ್ತವೆಂದು ಕಲ್ಪಿಸಲಸಾಧ್ಯ.

**ತಾ:**—ಈ ವಿಷಯದಲ್ಲಿ ನೀವು ನಿಶ್ಚಿಂತೆಯಿಂದಿರಬಹುದು. **(ಹಿಂದಕ್ಕೆ ನೋಡುತ್ತಾ ನೇತಾಜಿ ಹೋಗುತ್ತಾನೆ. ತಾರೆ ಅಲ್ಲಿಯೇ ಕುಳಿತುಬಿಡುತ್ತಾಳೆ.)**

---

# ಅಂಕ ೩

## ದೃಶ್ಯ ೧

**(ವಿಶಾಲಗಡ—ಗೋಪೀನಾಥಪಂತನ ಮನೆಯ ಚಾವಡಿ.
ಗೋಪೀನಾಥಪಂತನು ಕುಳಿತುಕೊಂಡು ಹಳೆಯ ಗ್ರಂಥದ ಪುಟಗಳನ್ನು ತಿರುವುತ್ತಿದ್ದಾನೆ.
ಕೃಷ್ಣಾಜಿಶಾಸ್ತ್ರಿ ಪ್ರವೇಶಿಸಿ ನಮಸ್ಕರಿಸುತ್ತಾನೆ.)**

**ಗೋ:**—ಓಹೋ! ಶಾಸ್ತ್ರಿಗಳು! ಎಲ್ಲಿಂದ ಅವತಾರವಾಯಿತು? ಹೀಗೆ ಬನ್ನಿ. ಇಲ್ಲಿಯೇ ಕುಳಿತುಕೊಳ್ಳಿ. **(ಆಸನವನ್ನು ಕೊಡುತ್ತಾನೆ. ಅವನು ಕುಳಿತು)**

**ಕೃ:**—ಅವತಾರವೇ! ಒಳ್ಳೆಯ ಪದಪ್ರಯೋಗ.

**ಗೋ:**—ಯಾವಾಗ "ಇಲ್ಲಿಗೆ" ಸವಾರಿಯಾಯಿತು ಎಂದು ಕೇಳಿದೆ?

**ಕೃ:**—ಈಗ, ಈಗ ಬಂದೆನಷ್ಟೆ.

**ಗೋ:**—ಅಯ್ಯೋ! ಗ್ರಹಚಾರವೇ! ಇಲ್ಲಿಗೆ ಈಗ ಬಂದುದೆಂದು ನನಗೇನು ತೋರುವುದಿಲ್ಲವೇ? ಕಣ್ಣಿಲ್ಲವೆಂದು ನಿಮ್ಮ ಭಾವನೆಯೇ?

**ಕೃ:**—ಛೇ! ಇಲ್ಲಿಗೆ ಎಂದರೆ, ನಮ್ಮ ಪಟ್ಟಣಕ್ಕೆ, ಅಲ್ಲವೇ?

**ಗೋ:**—ಅದಕ್ಕೂ ವ್ಯಾಖ್ಯಾನವಾಗಬೇಕು, ನಿಮಗೆ.

**ಕೃ:**—ನಾನು ನಿನ್ನೆ ಬಂದೆನಷ್ಟೆ.

**ಗೋ:**—ಈ ಕಡೆ ಏನು ದೃಷ್ಟಿಬಿತ್ತೋ?

**ಕೃ:**—ಇಲ್ಲಿಗೆ ನಮ್ಮಾಕೆ ಬಂದು ಬಹಳ ದಿವಸಗಳಾದುವು. ಆಕೆಯನ್ನು ಕರೆದುಕೊಂಡುಹೋಗುವ ಎಂದು ಬಂದೆನು.

**ಗೋ:**—ಅಲ್ಲ! ನಮಗೆ ಸ್ವರಾಜ್ಯವನ್ನು ತಂದಿರೋ ಎಂದು ಸಂದೇಹಗೊಂಡೆನು!

**ಕೃ:**—ಅದೇನು? ಅಂಗಡಿಯಲ್ಲಿ ಮಾರಾಟಕ್ಕಿರುವ ವಸ್ತುವೇ ಹಾಗೆ ತರಲಿಕ್ಕೆ?

**ಗೋ:**—ನಿಮ್ಮ ಶಿವಾಜಿಯ ಕೈಯಲ್ಲಿ ಇದೆಯಲ್ಲ, ಸ್ವರಾಜ್ಯ.

**ಕೃ:**—ಛೇ, ಛೇ! ಅದಿರುವುದು ಜನರ ಹೃದಯದಲ್ಲಿ.

**ಗೋ:**—ಹೃದಯದಲ್ಲಿಯೋ? ಅಬ್ಬ! ಹಾಗಾದರೆ ನಿಮ್ಮ ಶಿವಾಜಿ ಸ್ಥಾಪಿಸುವುದೇನನ್ನೋ?

**ಕೃ:**—ಜನರಲ್ಲಿರುವ ಆತ್ಮಾಭಿಮಾನ, ಸ್ವಜನಾಭಿಮಾನ, ಸ್ವದೇಶಪ್ರೇಮಗಳನ್ನು ಜಾಗ್ರತಿಗೊಳಿಸಿ, ಜನರಲ್ಲಿ ಐಕ್ಯವನ್ನುಂಟುಮಾಡಿ, ದುಷ್ಟರನ್ನು ನಿಗ್ರಹಿಸಿ, ಸಜ್ಜನರ ಪರಿಪಾಲನೆಗೆ ಹಿತಕಾರಿಯಾದ ಸರಕಾರವನ್ನು ಸ್ಥಾಪಿಸುವುದು. ಇದನ್ನೆ ಸ್ವರಾಜ್ಯವೆನ್ನುವುದು.

**ಗೋ:**—ಅಲ್ಲ-ಪುರಾತನದ ರಾಜಮನೆತನಗಳನ್ನು ಮಣ್ಣುಗೂಡಿಸಿ ಅವುಗಳ ಹಾಳುಕೊಂಪೆಯಮೇಲೆ ನಿಮ್ಮ ಅಧಿಕಾರವನ್ನು ಸ್ಥಾಪಿಸುವುದು.

**ಕೃ:**—ಅಯ್ಯೋ! ಸ್ವಾಮಿ! ನಿಮ್ಮಂತಹವರೂ ಹೀಗೆ ಹೇಳುವುದೇ?

**ಗೋ:**—ನಮ್ಮಲ್ಲಿ, ಇದ್ದುದನ್ನು ಅಡಗಿಸುವ ಸ್ವಭಾವವಿಲ್ಲ, ಶಾಸ್ತ್ರಿಗಳೇ! ಏನುಮಾಡುವುದು?

**ಕೃ:**—ಅದರಂತೆಯೇ, ಇಲ್ಲದುದನ್ನು ಕಲ್ಪಿಸಿಕೊಂಡು ಹೇಳುವ ಸ್ವಭಾವವೂ ಇರಬಾರದು.

**ಗೋ:**—ಇಲ್ಲದುದನ್ನು ನಾನೇನು ಹೇಳಿದೆ?

**ಕೃ:**—ರಾಜಮನೆತನಗಳನ್ನೆ ನಾಶಗೊಳಿಸುವುದು ಮಹಾರಾಜರ ಉದ್ದೇಶವೆಂದಿರಲ್ಲ!— ಎಂತಹ ಅಪವಾದವಿದು?

**ಗೋ:**—ಇದೊಂದು ಅಪವಾದವಲ್ಲವೇ?—ನಮ್ಮ ರಾಜಮನೆತನವನ್ನು, ಉತ್ತಮವಾದ ಮೋರೆವಂಶವನ್ನು, ನಾಶಗೊಳಿಸಲಿಕ್ಕೆ ಮಾಡುತ್ತಿರುವ ಪ್ರಯತ್ನಕ್ಕೇನೆನ್ನಬೇಕು, ಮಹಾಸ್ವಾಮಿೂ?

**ಕೃ:**—ಅಯ್ಯೋ! ಖಂಡೋಜಿನಾಯಕರು ಏನೇನೋ ಪ್ರಚಾರಗೊಳಿಸುತ್ತಾರೆಂದು, ಅವರ ಮಾತನ್ನು ನೀವೂ ನಂಬುವುದೇ?

**ಗೋ:**—ನಿಮ್ಮಂತಹ ಮೊದ್ದು ಪ್ರಾಣಿಗಳನ್ನು ನಾನು ನೋಡಿಲ್ಲ. ಎರಡಕ್ಕೆ ಎರಡು ಕೂಡಿದರೆ ನಾಲ್ಕಾಗುತ್ತದೆಂಬುದನ್ನು ನಂಬಲಿಕ್ಕೂ ನಿಮಗೆ ಸಂದೇಹ.

**ಕೃ:**—ಅರಮನೆಗೆ ಬೆಂಕಿಕೊಡುವಂತಹ ಹೀನಕಾರ್ಯವನ್ನು ಮಾಡುವವನೆ ನೇತಾಜಿ? ರಾಮ, ರಾಮ!

**ಗೋ:**—ಏಕೆ? ಅವನು ಗುಟ್ಟೆಂದು ತಿಳಿದಿರಬಹುದು. ಆದರೆ ಅವನನ್ನು ಆ ರಾತ್ರಿ ನೋಡಿದವರೆಷ್ಟು ಮಂದಿ, ಬಲ್ಲಿರಾ?

**ಕೃ:**—ಅವನು ಇಲ್ಲಿಗೆ ಬಂದಿದ್ದನೆಂದು ಅವನ ಮೇಲೆ ಅಪರಾಧ ಹೊರಿಸುವುದೇ?—ಅವನಾವ ಕೆಲಸದಲ್ಲಿ ಬಂದಿದ್ದನೋ?

**ಗೋ:**—ಓಹೋ! ಆ ಕೆಲಸವೂ ಗೊತ್ತಾಗಿದೆ. ನಮ್ಮ ತಾರೆಗೆ ಮಂಕುಬೂದಿಯನ್ನೆರಚಿ ಹೊತ್ತುಕೊಂಡುಹೋಗುವುದಕ್ಕೆ ಬಂದವನು ಅವನು. ನಮ್ಮ ನಾಯಕರು ಅವರ ಮಾತನ್ನೆಲ್ಲ ಮರೆಯಲ್ಲಿದ್ದು ಕೇಳಿದರಂತೆ.

**ಕೃ:**—ಓಹೋ! ಖಂಡೋಜಿರಾಯರು ಆ ಕೆಲಸದಲ್ಲಿ ಸಮರ್ಥರೇ!

**ಗೋ:**—ಜೋಕೆ ಶಾಸ್ತ್ರಿಗಳೇ! ನನ್ನ ಸಿಟ್ಟೆಬ್ಬಿಸಬೇಡಿ. ನಿಮ್ಮ ನೇತಾಜಿ ಬಹಳ ಸಂಭಾವಿತನಲ್ಲವೆ? ರಾಯರಿಲ್ಲದ ಕಾಲದಲ್ಲಿ ಉತ್ತಮಕುಲದ ಸ್ತ್ರೀರತ್ನವನ್ನು ಎತ್ತಿಹಾಕಲಿಕ್ಕೆ ಬಂದವನು!

**ಕೃ:**—ಹೇಗೂ- ಅವನು ಬಂದ ಕೆಲಸವು ಬೇರೆಯುಷ್ಟೆ!

**ಗೋ:**—ಆ ಕೆಲಸವಾಗಲಿಲ್ಲ; ಕೊಟ್ಟ ಬೆಂಕಿ. ಅವನು ಸಿಕ್ಕಲಿಲ್ಲವಲ್ಲ?—ಅಂತಹದೊಂದು ದೊಡ್ಡ ಬೆಂಕಿಯಲ್ಲಿ ಅವನನ್ನು ಕೈ

ಕಾಲು ಕಟ್ಟಿಹಾಕಿ ದೂಡಬೇಕಿತ್ತು. ಆಗ ನಮ್ಮ ನಾಡಜನರಿಗೆ ಸಮಾಧಾನವಾಗುತ್ತಿತ್ತು.

**ಕೃ:**—ಅಬ್ಬ! ನಿಮ್ಮ ಜನರು ಕಟುಕರಾಗಿರಬೇಕು.

**ಗೋ:**—ನಾವು ಕಟುಕರು, ದೇಶದ್ರೋಹಿಗಳು, ಸ್ವಾರ್ಥಪರರು. ನೀವು ಪುನೀತರು. ಆದರೆ ನಮ್ಮ ನಾಡಿಗೆ ನೀವು ಕಾಲಿಟ್ಟ ಕೂಡಲೆ ನಮಗೆ ಒದಗುವುದು ವಿಪತ್ತು.

**ಕೃ:**—ಪಂತರೇ! ನಮಗೇಕೆ ರಾಜಕೀಯ ವಿಚಾರಗಳು?

**ಗೋ:**—ಈ ವಿಚಾರಗಳನ್ನು ಹೊರಗೆ ಎಲ್ಲಿಯಾದರೂ ಎತ್ತಿದಿರೆಂದರೆ ನಿಮಗೆ ಸೆರೆಮನೆ. ರಾಯರನ್ನು ಕೊಂದುದಕ್ಕೆ ತಕ್ಕ ಪ್ರತೀಕಾರವಾಗಬೇಕೆಂದು ಜನರು ಬಾಯ್ಬಿಡುತ್ತಿರುವರು.

**ಕೃ:**—ಅಯ್ಯೋ! ರಾಯರಿಗೂ ದುರ್ಮರಣವೇ?

**ಗೊ:** ಹಾ! ಹಾ! ಏನು ಕಣ್ಣೀರು ಬಂತೋ?

**ಕೃ:**—ಏಕೆ? ಯಾರೂ ಕಣ್ಣೀರು ಸುರಿಯಬೇಕು ಇದನ್ನು ಕೇಳಿದರೆ.

**ಗೋ:**—ನೀವೂ?

**ಕೃ:**— ಅದೇನು? ನನಗೆ ಕರುಣೆಯಿಲ್ಲವೇ?

**ಗೋ:**— ಅಲ್ಲ; ಕೊಲ್ಲಿಸಿದವರಿಗೂ ವ್ಯಸನವುಂಟಾಗುತ್ತದೋ ಎಂದು!

**ಕೃ:**—ಆಗಲಿ; ಕೊಲೆಗಾರರ ಪತ್ತೆಯಾಗುವುದು. ಆಗ ನಿಮಗೂ ಸಮಾಧಾನವಾಗುವುದು. ನಮಗೇಕೆ ಆ ವಿಚಾರಗಳು? ನಾನು ಬಂದ ಕೆಲಸವೇ ಬೇರೆ.

**ಗೋ:**—ಇನ್ನಾರನ್ನು ಬಲಿಗೊಡುವುದೆಂದು ನಿಶ್ಚಯಿಸಲಿಕ್ಕೆ.

**ಕೃ:**—ಅಲ್ಲ; ನಿಮ್ಮ ಮಗನಿಗೆ ವಿವಾಹ . . .

**ಗೋ:**—ನನ್ನ ಮಗನ ಕಡೆಗೆ ದೃಷ್ಟಿಹರಿಯಿತೋ ನಿಮ್ಮದು? ನಮ್ಮ ಮನೆತನವು ರಾಜನಿಷ್ಠೆಗೆ ಹೆಸರುಗೊಂಡುದು. ನನ್ನ ಮಗನ ಕೈಯಿಂದ ರಾಜದ್ರೋಹವಾಗದಿರಲಿ; ಶಾಸ್ತ್ರಿಗಳೇ, ನಿಮಗೊಂದು ನಮಸ್ಕಾರ.

**ಕೃ:**—ಛೇ! ಇನ್ನೂ ಅದೇ ವಿಷಯ. ನಿಮ್ಮ ಮಗನ ಮದುವೆಯ ವಿಚಾರ.

**ಗೋ:**—ಮದುವೆಯೇ? ಯಾರಿಗೆ?- ನನ್ನ ಹುಡುಗನಿಗೆಯೇ?

**ಕೃ:**—ಬೇಗನೆ ವಿವಾಹಮಾಡಿಸಬೇಕೆಂದಿದ್ದೀರಂತೆ.

**ಗೋ:**—ಅದು ಹೇಗೂ ಆಗಬೇಕಲ್ಲ. ಆದರೆ, ಸರಿಯಾದ ಹುಡುಗಿ ಎಲ್ಲಿದೆ? ಬ್ರಹ್ಮನೆಲ್ಲಿ ಬರೆದಿದ್ದಾನೋ!

**ಕೃ:**—ನಮ್ಮ ನ್ಯಾಯಶಾಸ್ತ್ರಿಗಳ ಮಗಳು ಬಹಳ ರೂಪವತಿ, ವಿದ್ಯಾವತಿ, ಉತ್ತಮಕುಲದವಳು.

**ಗೋ:**—ಯಾರು? ಯಾರದು?

**ಕೃ:**—ನ್ಯಾಯಶಾಸ್ತ್ರಿಗಳು. ನನ್ನಾಕೆಯ ಅಕ್ಕನ ಗಂಡ.

**ಗೋ:**—(ಆಲೋಚಿಸಿ) ಅವರೆಲ್ಲಿಯವರೋ?

**ಕೃ:**—ಪುರಂದರಗಡದವರು.

**ಗೋ:**—ಸ್ವಾಮಿ, ಶಾಸ್ತ್ರಿಗಳೇ! ಪುರಂದರಗಡವೆಂದರೆ ನನಗೆ ನಡುಕವುಂಟಾಗುತ್ತದೆ.

**ಕೃ:**—ಹೆಣ್ಣು ತರಲಿಕ್ಕೇನು, ಪಂತರೇ! ಹುಡುಗಿ ಇಲ್ಲಿಯೇ ಹುಟ್ಟಿದವಳು.

**ಗೋ:**—ಆದರೆ, ಬಳೆದುದು ಅಲ್ಲಿಯಷ್ಟೆ! ಬರುವಾಗ ಸ್ವರಾಜ್ಯವನ್ನೂ ತಂದರೆ.

**ಕೃ:**—ಇನ್ನೂ ಸ್ವರಾಜ್ಯ! ಸ್ವರಾಜ್ಯವನ್ನು ತಂದರೆ ನಿಮಗೆ ಅನುಕೂಲವಲ್ಲವೇ?

**ಗೋ:**—ಬೇಡಪ್ಪ! ನನಗೆ ಹುಡುಗಿಯೂ ಬೇಡ; ಸ್ವರಾಜ್ಯವೂ ಬೇಡ.

**ಕೃ:**—ಪಂತರೇ! ರಾಜಕೀಯ ವಿಚಾರಕ್ಕೂ ನಂಟತನಕ್ಕೂ ಗಂಟು ಹಾಕಬೇಡಿ.

**ಗೋ:**—ನನಗಾ ನ್ಯಾಯಶಾಸ್ತ್ರಿಗಳ ರಗಳೆ ಬೇಡ.

**ಕೃ:**—ಅಂತಹ ಸಂಬಂಧವು ಇನ್ನೊಂದಿಲ್ಲ.

**ಗೋ:**—ಇದಕ್ಕೆ ಬಂದವರೋ ನೀವು? ನೀವು ಹೊರಟುದು ವಿಷಗಳಿಗೆಯಲ್ಲಿ! ದಯೆಯಿರಲಿ ಸ್ವಾಮಿ! ನಮಗೆ ನಿಮ್ಮ ಸಂಬಂಧವು ಬೇಡ.

**ಕೃ:**—ವಿಚಾರಿಸಿರಿ. ಅವರು ಹುಡುಗಿಗೆ ಬಹಳ ಚಿನ್ನಾಭರಣವನ್ನು ಕೊಡುತ್ತಾರೆ.

**ಗೋ:**—ಬಂಗಾರದ ಕವಚದಲ್ಲಿಯೇ ಹುಡುಗಿಯುನ್ನು ಮುಚ್ಚುವುದಿದ್ದರೂ ನನಗೆ ಪುರಂದರದ ಸಂಪರ್ಕವು ಬೇಡ. ಆಯಿತಷ್ಟೆ!

**ಕೃ:**—ಮದುವೆಯುನ್ನು ಇಲ್ಲಿಯೇ ಮಾಡಬಹುದು.

**ಗೋ:**—ಏನು? ನಾನಾರು ಬಲ್ಲಿರಾ? ರಾಜಪುರೋಹಿತನಲ್ಲನೇ ನಾನು?

**ಕೃ:**—ನ್ಯಾಯಶಾಸ್ತ್ರಿಗಳು ಮಹಾರಾಜರ ಪುರೋಹಿತರು. ಆದುದರಿಂದಲೇ ಅತ್ಯುತ್ತಮ ಸಂಬಂಧವೆಂದುದು.

**ಗೋ:**—ಅಯ್ಯೋ! ನಿಮ್ಮ ಹರಟೆಯೇ,—ನನ್ನ ಶಿಷ್ಯೋತ್ತಮನನ್ನು ಅಪಮೃತ್ಯುವಿಗೆ ಒಳಗಾಗಿಸಿದವನ ಆಶ್ರಿತರ ಸಂಬಂಧವೇ ನನಗೆ? ಅಂತಹವರಲ್ಲಿ ನಂಟತನವೇ? ಶಾಂತಂ ಪಾಪಂ!

**ಕೃ:**—ಕೊಂದವರು ಯಾರೋ? (ನಕ್ಕು) ನೀವು ನ್ಯಾಯಶಾಸ್ತ್ರಿಗಳಲ್ಲಿ ಕೋಪಿಸುವುದೇಕೊ?

**ಗೋ:**—ಬೇಡ, ಬೇಡವೆಂದರೆ ನಿಮ್ಮ ಒತ್ತಾಯುವೋ? (ಸಿಟ್ಟಿನಿಂದ ತನ್ನ ಹಳೆಯ ಗ್ರಂಥವನ್ನು ಬಿಸಾಡುತ್ತಾನೆ.)

**ಕೃ:** - ಸಿಟ್ಟಾಗಬೇಡಿ, ಸ್ವಾಮೀ! ಒತ್ತಾಯುವೆಲ್ಲಿಂದ?-ಒಳ್ಳೆಯ ಸಂಬಂಧವೆಂದು ನನಗೇನೋ ತೋರಿತು; ಸೂಚಿಸಿದೆ.

**ಗೋ:**—ಹೂಂ!-ಇನ್ನು ಆ ಮಾತೆತ್ತಿದರೆ . . .

**ಕೃ:**—ಇಲ್ಲಪ್ಪ! ನೀವು ಹೇಳಿದಂತೆಯೇ-ನಾನು ಹೊರಟ ಮುಹೂರ್ತವು ಒಳ್ಳೆಯದಲ್ಲ. (ಎದ್ದು ನಿಂತು)-ಆಗಲಿ, ಇನ್ನೊಮ್ಮೆ ಮಾತನಾಡುವ. (ನಮಸ್ಕರಿಸಿ) ನನಗೀಗ ಅಪ್ಪಣೆಯಾಗಲಿ.

**ಗೋ:**—ಹೂಂ!-ನಮಸ್ಕಾರಕ್ಕೆ ಪ್ರತಿ ನಮಸ್ಕಾರ. (ಕೃಷ್ಣಾಜಿಶಾಸ್ತ್ರಿ ಹೋಗುತ್ತಾನೆ.)

**ಗೋ:**—(ಚೆದರಿದ್ದ ತನ್ನ ಗ್ರಂಥದ ಹಾಳೆಗಳನ್ನು ಹೆಕ್ಕಿ ಸರಿಪಡಿಸುತ್ತಾ, ಆತ್ಮಗತ)

ಕಳ್ಳ! ಶುದ್ಧ ಕಳ್ಳ!-ನನ್ನ ಮಗನಿಗೆ ತಕ್ಕ ವಧುವನ್ನು ಹುಡುಕಿ ತಂದವನು. ನಾನು ಗಟ್ಟಿಯಾಗಿದ್ದುದರಿಂದ ಅವನ ಸ್ವರಾಜ್ಯದ ಕಂತೆಯನ್ನು ಬಿಚ್ಚಲಿಲ್ಲ. ಇಲ್ಲವಾದರೆ-? ಹೇಗಾದರೂ ಇಲ್ಲಿಯ ವಿಶೇಷ ವರ್ತಮಾನಗಳನ್ನುತಿಳಿದುಕೊಳ್ಳಬೇಕಷ್ಟೆ!-ಅದಕ್ಕೋಸ್ಕರ ಬಂದವನು,

ಕಳ್ಳ! ನಾನು ರಾಜಪುರೋಹಿತನಲ್ಲವೇ? ನನ್ನ ಅರಿವಿಲ್ಲದೆ ಅರಮನೆಯಲ್ಲಿ ಒಂದು ಕಡ್ಡಿಯೂ ಅಲ್ಲಾಡುವುದಿಲ್ಲವೆಂದು ಗೊತ್ತು ಅವನಿಗೆ. ಅದಕ್ಕೆ ನನ್ನ ಭೇಟಿಮಾಡುವುದು ಅವನು. ಆದರೆ, (ನಕ್ಕು) ನಾನೆಂತಹವನು?

---

## ದೃಶ್ಯ ೨

(ವಿಶಾಲಗಡ; ಅರಮನೆ; ರಘುನಾಥರಾಯನ ಮಹಲು.
ರಘುನಾಥರಾಯನೂ ಖಂಡೋಜಿಯೂ ಕುಳಿತಿದ್ದಾರೆ.)

**ಖಂ:**—ಮಾವ! ಆದುದು ಆಗಿಹೋಯಿತು. ಇನ್ನು ಚಿಂತಿಸಿ ಫಲವಿಲ್ಲ. ಇಂತಹ ಭೀಕರಕೃತ್ಯವನ್ನು ಶಿವಾಜಿ ಮಾಡಿಸಬಹುದೆಂದು ಯಾರು ತಿಳಿದಿದ್ದರು? ಇನ್ನುಮುಂದೆ ನಾವು ಬಹಳ ಜಾಗ್ರತೆಯಿಂದಿರಬೇಕು.

**ರ:**—ಏನು ಜಾಗ್ರತೆಯೋ, ಏನೋ?

**ಖಂ:**—ಇದೊಂದು ಸುಸಂದರ್ಭವೇ ನಮ್ಮ ಕಾರ್ಯಸಾಧನೆಗೆ ಬಹಳ ಅನುಕೂಲವಾಯಿತು. ನಮ್ಮ ಕಡೆಗೆ ಯಾರನ್ನೆಲ್ಲ ಒಲಿಸಿಕೊಳ್ಳಬಹುದೆಂಬುದನ್ನು ಬೇಗನೆ ತಿಳಿಯಬೇಕು.

**ರ:**—ಖಂಡ್ಯಾ! ಅಣ್ಣನ ಮರಣದಿಂದಾಗಿ ನನ್ನ ಬುದ್ಧಿಯೇ ಬರಡಾಗಿದೆ. ನನ್ನ ಮನಸ್ಸಿಗೆ ಶಾಂತಿಯಿಲ್ಲ.

**ಖಂ:**—ಉದ್ದೇಶಿಸಿದ ಕೆಲಸವನ್ನು ನೆರವೇರಿಸದೆ ಶಾಂತಿಯೆಲ್ಲಿಂದ?— ನನ್ನ ಬುದ್ಧಿಶಕ್ತಿ ಪ್ರಯೋಗದಿಂದ ತೀಕ್ಷ್ಣವಾಗುತ್ತದೆ. ಶಿವಾಜಿಯ ಮೋರೆಗೆ ಎಷ್ಟು ಸುಲಭದಲ್ಲಿ ಮಸಿಬಳಿದೆ. ನನ್ನ ಈ ಕತೆ ಜನರ ಮನಸ್ಸಿನಲ್ಲಿ ಎಂತಹ ಪರಿಣಾಮವನ್ನುಂಟುಮಾಡಿದೆ!

**ರ:**—ಹೂಂ!—ಖಂಡ್ಯಾ! ನಿನ್ನ ಬುದ್ಧಿಶಕ್ತಿ ಅಪಾರವಾದುದು. ಕುತಂತ್ರಗಳನ್ನು ಸಾಧಿಸಲಿಕ್ಕೂ ಸ್ಥೈರ್ಯವಿರಬೇಕಲ್ಲವೇ? ಆ ಗುಣವಿದ್ದರೆ ನನಗೀ ಗತಿಯೆ? ಇಂದಿನ ವರೆಗೆ ನಿನ್ನಾಲೋಚನೆಯಂತೆ

ನಡೆದವನು ನಾನು. ಇನ್ನು ಮುಂದೇನಾಗಬೇಕೆಂಬುದನ್ನು ನೀನೇ ಹೇಳು.

**ಖಂ:**—ನೆರೆಹೊರೆಯ ನಾಯಕರಿಗೆ ಆಮಂತ್ರಣವನ್ನು ಕಳುಹಿಸಬೇಕು. ಮೋರೆವಂಶಕ್ಕಾದ ಅಪಮಾನದ ಮತ್ತು ದ್ರೋಹದ ಸೇಡನ್ನು ತೀರಿಸಿಕೊಳ್ಳಲಿಕ್ಕೆ ಅವರೆಲ್ಲರೂ ನಮಗೆ ಸಹಾಯಮಾಡ ಬೇಕೆಂದು ಕೇಳಿಕೊಳ್ಳಬೇಕು.

**ರ:** –ಸರಿ! ಆಮೇಲೆ?

**ಖಂ:**—ದೊಡ್ಡ ಸೇನೆಯನ್ನು ಕೂಡಿಸಬೇಕು. ಪುರಂದರಗಡವನ್ನು ಸ್ವಾಧೀನಪಡಿಸಿಕೊಳ್ಳಬೇಕು. ಶಿವಾಜಿಯನ್ನು ನಿರ್ನಾಮಗೊಳಿ ಸಬೇಕು.

**ರ:**—ಇದು ಹೇಗೆ ಸಾಧ್ಯವೋ, ಏನೋ?—ಶಿವಾಜಿಯೆಂದರೆ ನನಗೆ ಭಯವಾಗುತ್ತದೆ.

**ಖಂ:**—ಮಾವಾ! ಎಲ್ಲವನ್ನೂ ಗುಣಿಸುತ್ತ ಲೆಕ್ಕಿಸುತ್ತ ಕುಳಿತರೆ ಕೆಲಸ ವೆಲ್ಲಿ ಸಾಧ್ಯವು? ನೀರಿಗೆ ಧುಮುಕಿಯಾಯಿತು. ದಡವನ್ನು ಸೇರುವ ಪ್ರಯತ್ನವನ್ನು ಮಾಡಬೇಕಲ್ಲವೇ?

**ರ:**—ಆಗಲಿ, ತಾರೆಯ ಅಭಿಪ್ರಾಯವೇನು? ಅವಳು ನಮ್ಮ ಸೂಚನೆ ಯನ್ನು ಮನ್ನಿಸುವಳೋ?

**ಖಂ:**—ತಂದೆಯ ಮರಣಕ್ಕೆ ತಕ್ಕ ಪ್ರತೀಕಾರವನ್ನು ಮಾಡುವುದರಲ್ಲಿ ಅವಳು ಬದ್ಧಕಂಕಣಳು.

**ರ:**—ಆದರೆ, ಖಂಡ್ಯಾ! ಶಿವಾಜಿಯನ್ನೂ ಅವನ ಸೇನೆಯನ್ನೂ ರಣ ರಂಗದಲ್ಲಿ ಇದಿರಿಸಿ ಯಶಸ್ವಿಗಳಾಗುವುದು ಅಸಾಧ್ಯವೆಂದೇ ನನ್ನ ಚಿಂತೆ.

**ಖಂ:** ಆರಾರು ನಮಗೆ ಸಹಾಯಮಾಡಲು ಮುಂದೊತ್ತುವರು, ನಮ್ಮ ಪ್ರಜೆಗಳ ಮನಸ್ಸು ಆವ ಕಡೆಗೆ ಒಲಿವುದು, ಎಂಬುದನ್ನು ತಿಳಿಯಲಿಕ್ಕೆ ಇದು ಸುಲಭೋಪಾಯ. ಶಿವಾಜಿಯನ್ನು ದಂಡೋ ಪಾಯದಿಂದ ಬಗ್ಗಿಸಲಾಗದಿದ್ದರೆ ಭೇದೋಪಾಯದಿಂದ ಪ್ರಯತ್ನಿ ಸಬೇಕು.

**ರ:**— ಖಂಡ್ಯಾ! ಅದನ್ನೆ ಮೊದಲು ಸಾಧಿಸಬಹುದಲ್ಲ?

**ಖಂ:** - ಮಾವಾ! ನಮ್ಮ ಸ್ನೇಹಿತರ ಮತ್ತು ಜನರ ಮನಸ್ಸನ್ನು ತಿಳಿವ ಸುಸಂದರ್ಭವು ಕೈತಪ್ಪಿಹೋಗುತ್ತದಲ್ಲವೇ?

**ರ:** —ಆಗಲಿ, ಖಂಡೋಜಿ! ನೀನೆಂದಂತೆಯೇ ಆಗಲಿ! ಆದರೆ, ಈ ವಿಷಯದಲ್ಲಿಯಾದರೂ (ಓರೆನೋಟದಿಂದ ಖಂಡೋಜಿಯನ್ನು ದೃಷ್ಟಿಸಿ) ತಾರೆಯ ಅಭಿಪ್ರಾಯದಂತೆ ನಾವು ನಡೆಯಬೇಕು. ಕಾರಣಾಂತರದಿಂದ ಅವಳಿಗೆ ನಮ್ಮಲ್ಲಿ ಸಂಶಯವುಂಟಾಗಬಹುದು.

**ಖಂ:** ಉಹೂ. (ಆತ್ಮಗತ)–ನಿನಗೂ ಸಂದೇಹವೆಂದು ತೋರುತ್ತದೆ! (ಪ್ರಕಾಶ) ಛೇ! ಅದಕ್ಕೆ ಆಸ್ಪದವಿಲ್ಲದಂತೆಯೇ ನಾವು ವರ್ತಿಸಬೇಕು. ಮಾವ! ವಿಷಯಗಳನ್ನೆಲ್ಲ ವಿಶದೀಕರಿಸುತ್ತೇನೆ.—ಹೇಗೂ ಅವಳನ್ನು ನಮ್ಮ ಮಾರ್ಗಕ್ಕೆ ತಿರುಗಿಸುವ ಭಾರವು ನನ್ನ ಮೇಲೆ.

**ರ:**—(ನಕ್ಕು)–ಸಹಜವಲ್ಲವೇ! ಹೆಂಡತಿ ಗಂಡನ ಮಾತನ್ನು ಕೇಳುವುದಿಲ್ಲವೆ?

**ಖಂ:**—ಎಲ್ಲಿಯ ಗಂಡಹೆಂಡಿರು ಮಾವ! ಅವಳಿಗೆ ನೇತಾಜಿಯ ಭ್ರಾಂತಿಯೇ ಹಿಡಿದಿದೆ. ಕೂತಲ್ಲಿ ನಿಂತಲ್ಲಿ ನೇತಾಜಿ!

**ರ:**— ಇನ್ನೂ ನೇತಾಜಿಯಲ್ಲಿ ಅವಳಿಗೆ ವಿಶ್ವಾಸವೇ?

**ಖಂ:**—ಮೊನ್ನೆಯಿಂದೇನೋ ಸ್ವಲ್ಪ ಬದಲಾವಣೆಯಿದೆ ಅವಳ ಸ್ಥಿತಿಯಲ್ಲಿ. ಆದರೆ ಪರಿಣಾಮವನ್ನು ಊಹಿಸುವುದು ಹೇಗೆ?

**ರ:** —ಹುಡುಗಿಯರ ಮನಸ್ಸೇ ಹಾಗೆ; ಬಹಳ ಚಂಚಲ.

**ಖಂ:**—ಅಯ್ಯೋ! ಚಂಚಲವಲ್ಲಪ್ಪ! ಸ್ಥಿರವಾದುದು- ನೇತಾಜಿಯಲ್ಲಿ ಒಮ್ಮೆ ನಟ್ಟ ಮನಸ್ಸು ಅಲ್ಲಿಂದ ಕದಲಲಿಕ್ಕೆ ಬಹಳ ಕಷ್ಟವಾಯಿತು. ಈಗ ಹೊರಳಿದುದು, ಪುನಃ ಅಲ್ಲಿಯೇ ಸ್ಥಿರವಾಗಬಹುದು.

**ರ:**--ಅದೊಂದು ಭ್ರಮೆ! ಆಗಾಗ ನೀನು ಅವಳನ್ನು ಕಂಡು ಮಾತನಾಡು; ಅವಳ ಬಯಕೆಯಂತೆ ನಡೆ; ಆಗ ನಿನ್ನಲ್ಲಿ ವಿಶ್ವಾಸವನ್ನಿಡುವಳು. ಅವಳು ನಿನ್ನನ್ನೇ ವರಿಸುವಳು, ಖಂಡ್ಯಾ! ಸಂಶಯಬೇಡ ನಿನಗೆ.

**ಖಂ:**— ಎಲ್ಲ ನಿಮ್ಮ ಆಶೀರ್ವಾದ, ಮಾವ.

**ರ:**—ಸರಿ! ಈಗ ರಾಜಕಾರ್ಯಕ್ಕೆಂದು ಹೋದವನು ಸ್ವಕಾರ್ಯವನ್ನೂ ಸಾಧಿಸುವುದು, ಮತ್ತೇನು?

**ಖಂ:**—ಮೊದಲು ರಾಜ್ಯವಿಚಾರ. ಸಾಯಂಕಾಲದಲ್ಲಿ ಪ್ರಜಾಪ್ರಮುಖರ ಸಭೆಯಲ್ಲಿ ಪ್ರಜೆಗಳನ್ನು ಹುರಿದುಂಬಿಸುವ ನಾಲ್ಕು ಮಾತುಗಳನ್ನು ಅವಳು ಆಡುವಂತೆ ಮಾಡಬೇಕು.

**ರ:**—ಯಶಸ್ವಿಯಾಗಪ್ಪ! (ಖಂಡೋಜಿ ಹೋಗುತ್ತಾನೆ.)
(ಆತ್ಮಗತ) ಅಯ್ಯೋ! ದೇವರೆ! ಎಂತಹ ಹೇಯಕೃತ್ಯವಿದು? ರಾಜ್ಯಲೋಭಕ್ಕೋಸ್ಕರ ಅಣ್ಣನನ್ನು, ತನ್ನ ಮಗನಂತೆ ನನ್ನನ್ನು ಪೋಷಿಸಿದವನನ್ನು ಬಲಿಗೊಡಬೇಕಾಯಿತೇ? — ನನಗೇನೋ ಖಂಡೋಜಿಯಲ್ಲೆ ಸಂದೇಹ!-ಆದರೆ, ಅವನು ಇಲ್ಲಿಯೇ ಇದ್ದನಲ್ಲ?-ಅಯ್ಯೋ-ಆ ಆಲೋಚನೆಯೇ ನನ್ನ ಮನಸ್ಸನ್ನು ಕುದಿವಂತೆ ಮಾಡುತ್ತದೆ. ಆ ಬಾಲೆ ತಾರೆಯ ಕಂದಿದ ಮೊಗವನ್ನು ನೋಡುವಾಗ ಅಣ್ಣನ ಸ್ಮರಣೆಯಾಗುತ್ತದೆ. ಅಯ್ಯೋ! ನನಗೆ ಪ್ರಾಯಶ್ಚಿತ್ತವೇನು?

---

## ದೃಶ್ಯ ೩

(ಪುರಂದರಗಡ. ಸುಗುಣನಾಯಕನ ಮನೆಯ ಚಾವಡಿ.
ನೇತಾಜಿ ಮತ್ತು ಮಾರೋಜಿ ಉಚಿತಾಸನಗಳಲ್ಲಿ ಕುಳಿತಿದ್ದಾರೆ.)

**ನೇ:**—ಮಾರೋಜಿ! ತಾರೆ ಎಂತಹ ದುಃಖದಲ್ಲಿರಬಹುದು? ಅವಳನ್ನು ಸಮಾಧಾನಗೊಳಿಸುವ ಭಾಗ್ಯವೆನಗಿಲ್ಲ. ಖಂಡೋಜಿ ಇನ್ನೇನೆಲ್ಲ ಬಲೆಯನ್ನೊಡ್ಡಿದ್ದಾನೋ? ಅವಳನ್ನು ಇನ್ನೆಷ್ಟು ಸಂಕಟಕ್ಕೊಳಪಡಿಸಿದ್ದಾನೋ? ನಿಜವಾಗಿಯೂ ಅವಳನ್ನು ಅವನು "ಪ್ರೇಮ, ಪ್ರಣಯ" ಎಂದು ಪೀಡಿಸುತ್ತಿರಬಹುದಲ್ಲವೇ?

**ಮಾ:**—ಏನುಮಾಡುವುದು? ಎಲ್ಲವೂ ದೈವೇಚ್ಛೆ!

**ನೇ:**—ನನಗೇನೋ ಅವಳನ್ನು ಕರೆದುಕೊಂಡು ಬರಬೇಕೆನಿಸುತ್ತದೆ. ಅವಳು ಮನವೊಲಿದು ನನ್ನನ್ನು ಪ್ರೀತಿಸುತ್ತಾಳೆ. ಅವಳ ತೀರ್ಥರೂಪರು ಸ್ವರ್ಗಸ್ಥರಾದ ಮೇಲೆ ಬೇರೆಯವರ ಅನುಮತಿಯನ್ನು ಪಡೆವ ಆವಶ್ಯಕತೆಯಿಲ್ಲ.

**ಮಾ:**—(ನಿರಾಶೆಯನ್ನು ಸೂಚಿಸುವಂತೆ ನಕ್ಕು) ಸ್ವಾಮಿ! ನೀವಿನ್ನೂ ಆಕಾಶಗೋಪುರವನ್ನು ಕಟ್ಟುತ್ತಿದ್ದೀರಿ. ಅಲ್ಲಿಯ ಸ್ಥಿತಿಗತಿಗಳನ್ನು ನೀವು ತಿಳಿದಿಲ್ಲ. ಅಂದೇ ರಾತ್ರಿ ನೀವು ಹೊರಟುಬಂದುದು ಪೂರ್ವಪುಣ್ಯದಿಂದ. ಬೆಳಗಿನ ವರೆಗೆ ನೀವು ಅಲ್ಲಿ ಇರುತ್ತಿದ್ದರೆ ನಿಮಗೆ ಸೆರೆಮನೆಯೇ ಒದಗುತ್ತಿತ್ತು. ದ್ರೋಹಿಗೆ ತಕ್ಕ ಶಿಕ್ಷೆಯೂ ಆಗುತ್ತಿತ್ತು.

**ನೇ:**—ಮಾರೂ! ಖಂಡೋಜಿಯೇನೋ ನನ್ನ ಮರಣವನ್ನಿದಿರುನೋಡುತ್ತಾನೆ. ಆದರೆ ತಾರೆ-ಆ ಮುಗ್ಧಬಾಲೆ-ಅವನ ಸವಿಮಾತುಗಳಿಗೆ ಮರುಳಾಗಿರಬಹುದು.

**ಮಾ:**—ಏನೋ! ನಿಮ್ಮನ್ನು ಸೆರೆಹಿಡಿವಂತ ಗುಪ್ತಚರರನ್ನು ಕಳುಹಿಸಬೇಕೆಂದು ಒತ್ತಾಯಿಸಿದುದೇ ನಮ್ಮ ತಾರಮ್ಮ. ಇನ್ನಾದರೂ ನೀವು ನಮ್ಮ ರಾಜ್ಯದಲ್ಲಿ ಕಾಲಿಟ್ಟ ಕೂಡಲೆ ನಿಮಗೆ ಬಂದಿವಾಸವೇ ಗತಿ.

**ನೇ:**—ಏನೋ?–ಆ ರಾತ್ರಿ ಆವಳು ಬಹಳ ಗಾಬರಿಗೊಂಡು ನನ್ನ ವಿನಾಶಕ್ಕೆ ಅಪ್ಪಣೆಯನ್ನು ಕೊಟ್ಟಿರಬಹುದು. ಆದರೆ ಈಗ–ಸಿಟ್ಟು ಹೋಗಿ ವಿವೇಕವು ಬಲವಾದಾಗ ತನ್ನ ಅಲ್ಪತೆಗಾಗಿ ಅವಳೇ ಮರುಗಬಹುದು.

**ಮಾ:**—ನಿಮಗೇನೋ ಅವರ ದಯೆಯಲ್ಲಿ ಅಚಲವಾದ ನಂಬುಗೆ. ಅದು ಪ್ರೀತಿಯಿಂದಾಗಿ. ಆದರೆ, ಸ್ತ್ರೀಯರು ವಿಶ್ವಾಸಪಾತ್ರರಲ್ಲವೆಂಬುದನ್ನು ನೀವು ಇನ್ನು ಮನಗಾಣಬೇಕಷ್ಟೆ!

**ನೇ:**—ಸ್ತ್ರೀವರ್ಗವನ್ನೆ ಹೀಗೆ ನಿಂದಿಸುವುದೆ, ಮಾರೋಜಿ? ಗಂಡುಸರಲ್ಲಿರುವ ಸ್ಥೈರ್ಯವೂ, ವಿವೇಕವೂ, ಚಾತುರ್ಯವೂ ಅವರಲ್ಲಿಲ್ಲವೆಂದು ನಾವು ಅವರನ್ನು ಹಳಿವುದೇ? ನಮ್ಮ

ಸದ್ಗುಣಗಳೊಂದಿಗೆ ಕ್ರೌರ್ಯ, ನಿಷ್ಠುರತೆ, ಕಾಪಟ್ಯ, ಸ್ವಾರ್ಥ ಪರತೆ ಮೊದಲಾದ ದುರ್ಗುಣಗಳೂ ಸೇರಿಕೊಂಡಿಲ್ಲವೇ? ಸ್ತ್ರೀಯರ ಸರಳತೆ, ಮುಗ್ಧತೆ, ನಿಸ್ವಾರ್ಥತೆಗಳಿಂದಾಗಿಯೇ ಲೋಕವು ನಡೆಯುತ್ತಿದೆ.

**ಮಾ:**—ನನ್ನನ್ನು ಕ್ಷಮಿಸಿರಿ!–ಆದರೆ, ತಾರನ್ಮನವರು ತಮ್ಮ ತಂದೆಯವರನ್ನು ಕೊಲ್ಲಿಸಿದ ಮಹಾರಾಜರ ಮೇಲೆ ಸೇಡನ್ನು ತೀರಿಸಿಕೊಳ್ಳದೆ ಸುಖೋಪಭೋಗಗಳನ್ನು ಕಣ್ಣೆತ್ತಿಯೂ ನೋಡುವುದಿಲ್ಲವೆಂದು ತೀವ್ರವಾದ ಪ್ರತಿಜ್ಞೆಯನ್ನು ಮಾಡಿದ್ದಾರೆ.

**ನೇ:**—ಸತ್ಯಸಂಗತಿಗಳನ್ನು ತಿಳಿಯದೆ ಮಾಡಿದ ಪ್ರತಿಜ್ಞೆಯದು. ನಿಜವಾದ ವಿಚಾರಗಳು ತಿಳಿದರೆ, ಸ್ತ್ರೀಸಹಜವಾದ ಔದಾರ್ಯದಿಂದ ಮಹಾರಾಜರನ್ನೂ ನನ್ನನ್ನೂ ಮನ್ನಿಸುವಳೆಂಬುದರಲ್ಲಿ ಸಂದೇಹವಿಲ್ಲ.

**ಮಾ:**—ರಾಯರನ್ನು ಕೊಲ್ಲಿಸಿದವರು ಮಹಾರಾಜರೇ ಎಂದು ಊರವರಲ್ಲಿಯೂ ಭಾವನೆ.

**ನೇ:**—ಅದು ಖಂಡೋಜಿಯ ಹೇಳಿಕೆ. ನಾಯಕರ ಮಾತುಗಳನ್ನು ಪ್ರಜೆಗಳು ನಂಬುತ್ತಾರೆ. ಅದಿರಲಿ; ಖಂಡೋಜಿಯ ಕುತಂತ್ರವೇ ರಾಯರ ದುರ್ಮರಣಕ್ಕೆ ಕಾರಣವು. ನೀನೇನೆನ್ನುತ್ತೀ?

**ಮಾ:**—ಏನೋ, ಸ್ವಾಮಿ! ರಾಯರ ಜತೆಯಲ್ಲಿ ಕಾಡಲ್ಲಿದ್ದ ಎಷ್ಟೋ ಸೈನಿಕರನ್ನು ಪ್ರಶ್ನಿಸಿದೆನು. ಆದರೆ ಯಾರಿಗೂ ಸತ್ಯ ಸಂಗತಿ ತಿಳಿದಿಲ್ಲ. ಅವರು ಬೇಟೆಯಾಡುತ್ತಿದ್ದಾಗ ಎಲ್ಲಿಂದಲೋ ಬಂದ ಬಾಣವೊಂದು ತಗಲಿ ಸತ್ತರೆಂದು ಸೈನಿಕರ ಹೇಳಿಕೆ.

**ನೇ:**—ಆಗಲಿ; ಬಾಣವು ಮರದಿಂದ ಬಂದಿರಲಿಕ್ಕಿಲ್ಲವಷ್ಟೇ?

**ಮಾ:**—ಅದು ನಿಜ. ಆದರೆ–ಜಾವಳಿಯಲ್ಲಿ ರಾಯರ ದ್ವೇಷಿಗಳಿಲ್ಲ. ಆದುದರಿಂದ ಮಹಾರಾಜರ ಕಡೆಯವರೇ ಈ ಕೆಲಸವನ್ನು ಮಾಡಿರಬೇಕೆಂದು ಜನರ ಊಹೆ.

**ನೇ:**—ಇರಲಿ! ಕೊಲೆಪಾತಕಿಯ ಪತ್ತೆಯಾಗುವುದು. "ಸತ್ಯಕ್ಕೆ ಚ್ಯುತಿಯಿಲ್ಲ"ವೆಂದಲ್ಲವೇ ನಮ್ಮ ಮಹಾರಾಜರ ನಂಬುಗೆ?

**ಮಾ:**— ಅಪರಾಧಿಯನ್ನು ಗೊತ್ತುಹಚ್ಚಲಿಕ್ಕೆ ಪ್ರಯತ್ನಿಸಬೇಕು, ಸ್ವಾಮಿ!

**ನೇ:**—ಹೂಂ—ನೀನು ಹಿಂದಿರುಗಿ ಹೋಗುವುದಾವಾಗ?

**ಮಾ:**— ನಾನಿನ್ನೇಕೆ ಅಲ್ಲಿಗೆ ಹೋಗುವುದು?

**ನೇ:**— ಛೇ! ನಿನ್ನಿಂದ ಅಲ್ಲಿ ಆಗಬೇಕಾದ ಕೆಲಸಗಳು ಎಷ್ಟೋ ಇವೆ.

**ಮಾ:**—ನನ್ನಿಂದ ಇನ್ನೇನಾಗುವುದು? ನನ್ನನ್ನು ಇನ್ಯಾರು ನಂಬುವರು? ನಾನು ನಿಮ್ಮ ಮೆಚ್ಚಿನ ಬಂಟನೆಂದು ಖಂಡೋಜಿಯವರಿಗೆ ದೃಢವಾಗಿದೆ. ಅಯ್ಯೋ! ನನ್ನನ್ನು ಎಲ್ಲ ಕಡೆಯಲ್ಲಿಯೂ ಗುಟ್ಟಾಗಿ ಕಾಯುತ್ತಿದ್ದಾರೆ.

**ನೇ:**—ನಮಗೆ ಖಂಡೋಜಿಯಲ್ಲಿ ಕೆಲಸವಿಲ್ಲ. ರಾಜಕಾರ್ಯಗಳ ವಿಷಯ ಹಾಗಿರಲಿ. ಆದರೆ ತಾರೆಯ ಅಂತರ್ಯವನ್ನು ತಿಳಿಯಬೇಕಲ್ಲವೇ?

**ಮಾ:**— ಅಯ್ಯೋ! ಈ ಕೆಲಸವನ್ನು ನಾನು ಹೇಗೆ ಮಾಡಲಿ?

**ನೇ:**— ಏಕೋ? ನಿನ್ನ ಹೆಂಡತಿ ಅವಳ ಚಾಕರಿಯಲ್ಲಿಲ್ಲವೇ?

**ಮಾ:**—ಏನು ಚಾಕರಿಯೋ? ಅವಳನ್ನು ಅರಮನೆಯೊಳಗೆ ಕರೆಯಬಾರದೆಂದು ಖಂಡೋಜಿಯವರ ಹೇಳಿಕೆಯಂತೆ. ತಾರಮ್ಮನೇನೋ—ಇರಲಿ, ಕೆಲವು ದಿವಸ ಎಂದಿನಂತೆ ಚಾಕರಿಮಾಡಲಿ ಎಂದರಂತೆ.

**ನೇ:**— ನಮ್ಮ ಕೆಲಸಕ್ಕೆ ಅಷ್ಟೇ ಸಾಕು!

**ಮಾ:** —ಆದರೆ, ಅಮ್ಮನವರೂ ಮೊದಲಿನಂತೆ ಮನಬಿಚ್ಚಿ ಮಾತನಾಡುವುದಿಲ್ಲವಂತೆ; ಹಾಗೆ ಹೇಳುತ್ತಾಳೆ, ಸಖು.

**ನೇ:**— ದುಃಖದಿಂದ ಮನಸ್ಸು ಕಳವಳಗೊಂಡಿರಬಹುದು. ಅದು ಕಡಮೆಯಾಗಲಿ; ಆಗ ಮಾತುಕತೆಗಳು ಸಹಜವಾಗಿ ಹೆಚ್ಚುವುವು.

**ಮಾ:**—ಏನೋ? ನನಗೆ ತಿಳಿಯದು. ಆದರೆ ಅವರು ಮೊದಲಿನ ತಾರಮ್ಮನಲ್ಲ.

**ನೇ:**—(ನಗುತ್ತಾ) ಆಗಲಿ, ಹೊಸ ತಾರಮ್ಮನಿಗೊಂದು ಪತ್ರವನ್ನು ಕೊಡಬೇಕು.

**ಮಾ:**—ಅಯ್ಯೋ! ಮೊದಲಿನ ಪತ್ರದ ಗತಿ ಗೊತ್ತಿಲ್ಲವೇ ನಿಮಗೆ.

**ನೇ:**—ಒಳ್ಳೆಯ ಸಂದರ್ಭವನ್ನು ನೋಡಿ ನಿನ್ನ ಸಖಿ ಅದನ್ನು ತಾರೆಗೆ ಏಕಾಂತದಲ್ಲಿ ಕೊಡಲಿ.

**ಮಾ:**—ಅಯ್ಯೋ! ಈ ಪತ್ರದ ವಿಚಾರ ನಾಯಕರಿಗೆ ತಿಳಿದರೆ ಅವಳನ್ನು ಶೂಲಕ್ಕೇರಿಸಿಯಾರು-ಶೂಲಕ್ಕೆ?

**ನೇ:**—ಓಹೋ! ಅಷ್ಟು ಭಯವೋ ನಿನಗೆ?

**ಮಾ:**—ನನಗಲ್ಲ, ಸ್ವಾಮೀ! ಆದರೆ, ಪಾಪ-ಬಡ ಹೆಂಗುಸೊಬ್ಬಳನ್ನು ನಮ್ಮ ಅಜಾಗ್ರತೆಯಿಂದಾಗಿ ಬಲಿಗೊಡುವುದೇ? ಇದಾವ ನ್ಯಾಯ?

**ನೇ:**—(ಆಲೋಚಿಸಿ) ನಿಜ, ಅವಳು ಅಪಾಯಕ್ಕೊಳಗಾಗಬಾರದು.

**ಮಾ:**—ನಿಷ್ಪ್ರಯೋಜನವಾಗಿ ಏಕೆ ಎಂದು ನಾನು ಹೇಳಿದೆನಷ್ಟೆ!

**ನೇ:**—ಆಗಲಿ, ಅವಳೆ ಬಾಯಿಮಾತಿಂದ ನನ್ನ ಸಂದೇಶವನ್ನು ತಾರೆಗೆ ಹೇಳಲಿ.

**ಮಾ:**—ಕೆಲವೆ ಶಬ್ದಗಳೆಂದಾದರೆ ಬಾಯಿಪಾಠ ಮಾಡಿಸುತ್ತೇನೆ.

**ನೇ:**—ಇಗೋ, (ಮಾರೋಜಿ ಸಮೀಪಕ್ಕೆ ಬರುತ್ತಾನೆ, ಗುಟ್ಟಾಗಿ ಸಂದೇಶವನ್ನು ಹೇಳಿ) ಇಷ್ಟೆ.

**ಮಾ:**—ಇದನ್ನು ಅರೆಗಳಿಗೆಯೊಳಗೆ ಬಾಯಿಪಾಠ ಮಾಡಿಸುವುದಿಲ್ಲವೇ?

**ನೇ:**—ಅಲ್ಲದೆ, ಅವಳ ಅಂತರಂಗವನ್ನೂ ಕಾರ್ಯದ ಗೂಢವನ್ನೂ ತಿಳಿವಂತೆ ಹೇಳಿಬಿಡು, ನಿನ್ನ ಸಖಿಗೆ.

**ಮಾ:**—ಅಮ್ಮನವರು ಮಾತನಾಡಲಿಕ್ಕೆ ಆರಂಭಮಾಡಲಿ-ಆ ಮೇಲೆ. ನನ್ನ ಸಖಿಯೇನು ಸಾಮಾನ್ಯಳೇ? ಆ ಮಾತು ಈ ಮಾತೆಂದು ಅವರ ಹೃದಯವನ್ನೆ ತಿಳಿವುದಿಲ್ಲವೇ?

**ನೇ:**—ಪ್ರಯತ್ನಿಸಲಿ— ಆ ಕಡೆಯ ವರ್ತಮಾನವು ನನಗೆ ತಿಳಿವ ಬಗೆ ಹೇಗೆ, ಮಾರೋಜಿ?

**ಮಾ:**—(ಆಲೋಚಿಸುತ್ತಾ) ನಾನು ಪದೇ ಪದೇ ಇಲ್ಲಿಗೆ ಬಂದರೆ ನನ್ನನ್ನು ಗಡಿಪಾರು ಮಾಡುವರಲ್ಲ, ಬುದ್ಧೀ!

**ನೇ:**— ಅದಕ್ಕೂ ಒಂದು ಉಪಾಯವಿದೆ (ಗುಟ್ಟಾಗಿ ಹೇಳುತ್ತಾನೆ.)

**ಮಾ:**— ಒಳ್ಳೆಯ ಉಪಾಯ. ಸರಿ, ಹಾಗೆಯೇ ಮಾಡುತ್ತೇನೆ. ಪ್ರತಿ ಆದಿತ್ಯವಾರ ಮುಂಜಾನೆ ಆ ಮರದ ಬುಡಕ್ಕೆ ಬನ್ನಿರಿ.

**ನೇ:**— ಮಾರೋಜಿ! ನೀನೇ ಅಲ್ಲವೆ ನನ್ನ ಆಪ್ತನು; ಸ್ವಾಮಿನಿಷ್ಠ ಸೇವಕನು.

**ಮಾ:**— ಹಾ! ಅವೆಲ್ಲ ಬೇಡ! ನನಗೇಕೆ ಈ ಹೊಗಳಿಕೆ? ಸ್ವಾಮಿ, ನನಗೆ ಅಪ್ಪಣೆಯಾಗಲಿ. (ನಮಸ್ಕರಿಸುತ್ತಾನೆ.)

**ನೇ:**— ಕೃತಕಾರ್ಯನಾಗು, ಅಂಬಾಭವಾನಿ ನಿನ್ನನ್ನು ಸಂರಕ್ಷಿಸಲಿ.

(ಮಾರೋಜಿ ಹೊರಟುಹೋಗುತ್ತಾನೆ.)

(ಆತ್ಮಗತ) ಓಹೋ! ಖಂಡೋಜಿಯ ಚಾತುರ್ಯವನ್ನು ಮೆಚ್ಚಲೇ ಬೇಕು. ಈ ಬುದ್ಧಿವಂತಿಕೆ ನಮ್ಮ ಸತ್ಕಾರ್ಯದಲ್ಲಿ ಪ್ರಯೋಗ ವಾದರೆ ನಮ್ಮ ಕೆಲಸವು ಎಷ್ಟು ಬೇಗನೆ ಕೈಗೂಡಬಹುದು!– ಆದರೆ, ಮಹತ್ವಾಕಾಂಕ್ಷೆ ಮುಂದಿಟ್ಟ ಮರೀಚಿಕೆಯನ್ನರಸಿ ಓಡುವ ಆ ಮನಸ್ಸನ್ನು ಹಿಂದಿರುಗಿಸುವುದಾದರೂ ಹೇಗೆ? ಮಹಾರಾಜರ ಸದುದ್ದೇಶದ ಅರಿವಿಲ್ಲವೇ ಅವನಿಗೆ? ಅದನ್ನು ವಿಶದೀಕರಿಸಿದರೆ ಅವನ ಮನಸ್ಸಿನ ಪರಿವರ್ತನೆಯಾಗಬಹುದೇ? ಏನೋ!

---

## ದೃಶ್ಯ ೪

(ವಿಶಾಲಗಡ; ಅರಮನೆ; ತಾರೆಯ ಅಂತಃಪುರ.
ತಾರೆ ಗೋಡೆಯಲ್ಲಿ ತೂಗಹಾಕಿರುವ ತನ್ನ ತಂದೆಯ ಚಿತ್ರವನ್ನೂ ಕೈಯಲ್ಲಿರುವ ನೇತಾಜಿಯ ಚಿತ್ರವನ್ನೂ ನೋಡಿಕೊಂಡು ವಿಚಾರಮಗ್ನಳಾಗಿದ್ದಾಳೆ.
ಸಖಿ ಪ್ರವೇಶಿಸಿ)

**ಸ:**—(ಆತ್ಮಗತ) ಆಯಿತು; ಇದೇ ಅವಸ್ಥೆ! ಆ ಚಿತ್ರ, ಈ ಚಿತ್ರ–ಅಲ್ಲ! ಅವು ದಿವಸದಿಂದ ದಿವಸಕ್ಕೆ ಬೆಳೆಯುತ್ತವೋ ಏನೋ? ಅವು ಗಳಲ್ಲೇನು ಕಳೆಯೇರುತ್ತದೋ? – ಹೀಗೆ ಒಂದೆರಡು ಗಳಿಗೆ

ವರೆಗೂ ಕಣ್ಣುಬಿಟ್ಟು ನೋಡಲಿಕ್ಕೆ ಅವುಗಳಲ್ಲೇನಿದೆ? ಇದನ್ನೆ ಹುಚ್ಚು, ಹುಚ್ಚೆನ್ನುವುದು!— ಈ ಚಿತ್ರವನ್ನು ನಾನೆಷ್ಟು ಸಲ ನೋಡಿಲ್ಲ? ನೋಡಿದಾಗ ಒಮ್ಮೆ ನಮ್ಮ ರಾಯರ ನೆನವಾಗುತ್ತದೆ. ಆಯಿತಲ್ಲ! ಅದನ್ನೆ ಹೀಗೆ ನೋಡುತ್ತಾ ಇದ್ದರೆ ಇನ್ನೇನು ಹೆಚ್ಚು ತೋರುತ್ತದೋ? ಯಾರು ಬಲ್ಲ?

**ತಾ:** (ಆತ್ಮಗತ) ನಿಜ! ನಿಜವಾಗಿಯೂ ನಿಮ್ಮಪ್ಪಣೆಯಂತೆಯೇ ನಡೆಯುತ್ತೇನೆ. ನಿಮ್ಮ ಅಪಮೃತ್ಯುವಿಗೆ ತಕ್ಕ ಪ್ರಾಯಶ್ಚಿತ್ತವಾಗಲೇಬೇಕು. ಅಪ್ಪಾ! ನಿಮಗೆ ದುರ್ಮರಣವೊದಗಿಸಿದವನನ್ನು ಪ್ರತೀಕಾರಯಜ್ಞಕ್ಕೆ ಪೂರ್ಣಾಹುತಿಯಾಗಿ ಅರ್ಪಿಸುತ್ತೇನೆ. ಅಯ್ಯೋ! ನೀವು ಕಣ್ಣು ಕೆರಳಿಸುವುದೇಕೆ? ನಿಮ್ಮ ಮಗಳು ಪ್ರತಿಜ್ಞಾಭಂಗವನ್ನು ಮಾಡುವವಳಲ್ಲ; ವಿಶ್ವಾಸವಿಲ್ಲವೇ ನನ್ನಲ್ಲಿ! ತನ್ನ ಬಂಧುಬಾಂಧವರ ಮಧ್ಯದಲ್ಲಿದ್ದು ಸಾಯುವವನ ಮುಖದಲ್ಲಿರಬಹುದಾದ ಶಾಂತತೆ ಅಪಮೃತ್ಯುಗೊಳಗಾದವನ ಮುಖದಲ್ಲಿ ಹೇಗಿದ್ದೀತು? ಆ ಮರಣಕಾಲದ ಕಳವಳವೇ ನಿಮ್ಮ ಮುಖದಲ್ಲಿದೆ. ತಂದೇ! ನಿಮ್ಮ ಮುಖವು ವಿಕಾರಗೊಂಡಿದೆ! ಅಯ್ಯೋ! ನಾನು ನೋಡಲಾರೆನು. ಹೂಂ! ಮಾಡಿದ ಪ್ರತಿಜ್ಞೆಯಿದೆ. ಅದನ್ನು ನಾನು ಮುರಿದರೆ ಆಗ ಪುನಃ ಕಾಣಿಸಿಕೊಳ್ಳಬಹುದು. ನಿಮ್ಮ ಆತ್ಮಕ್ಕೆ ಶಾಂತಿಯನ್ನೊದಗಿಸದ ಮಗಳಿದ್ದರೇನು? ಸತ್ತರೇನು? ಆಹಾ! ಮುಗುಳುನಗೆ, ತಂದೆಗೆ ಆನಂದವಾಯಿತು. ಈ ಆನಂದವೇ ಚಿರಕಾಲವಿರಲಿ.

ಈ ಚಿತ್ರವು ನನ್ನ ಕೈಯಲ್ಲಿರುವಾಗ ತಂದೆಗೆ ಹೇಗೆ ಸಮಾಧಾನವಾದೀತು? (ಕೆಳಗೆ ಹಾಕಿ) ಇದನ್ನೊದೆದರೆ—ಹಾ! ಇಲ್ಲ! ತಂದೆಯವರು ಸಿಟ್ಟುಗೊಂಡಂತಿದೆ; ಪುನಃ ಹುಬ್ಬುಗಂಟಿಕ್ಕಿದರು . . . . ಅಪ್ಪಾ! ಏಕೆ? ನಿಮ್ಮ ಅಶಾಂತಿಗೆ ಕಾರಣವಲ್ಲವೇ ಈ ಕೃತಘ್ನನು! ಇವನಿಂದಾಗಿಯೇ ನಿಮಗೆ ದುರ್ಮರಣವೊದಗಿದುದಲ್ಲವೇ?—ಏನು? ನನ್ನ ಪ್ರಿಯತಮನೆಂದು ನಿಮಗೂ ಕನಿಕರವೇ?—ಮಗಳಿಗೆ ತಂದೆಯ ಮೇಲಣ ಭಕ್ತಿವಿಶ್ವಾಸವೇ ನೈಸರ್ಗಿಕವಾದುದು; ತಂದೆಯ ಆತ್ಮತೃಪ್ತಿಯೇ

ಸುಖದಾಯಕವು.—ಪ್ರೇಮ, ಪ್ರಣಯ, ಮೋಹ, ಎಲ್ಲವೂ ಬುದ್ಧಿಯನ್ನು ವಿಕಾರಗೊಳಿಸುವವು! ಸ್ವಾರ್ಥವನ್ನು ಉದ್ರೇಕಿಸುವವು! ದುರಾಶೆಯನ್ನುಂಟುಮಾಡುವವು! ಸಂಸಾರಬಂಧನದಲ್ಲಿ ಕಟ್ಟಿಡುವವು!

ಛೀ!-ಅಪ್ಪಾ! ಮೋಹಪಾಶವನ್ನು ಕಡಿದು ಕರ್ತವ್ಯಬದ್ಧಳಾದ ಮಗಳನ್ನು ಆಶೀರ್ವದಿಸಿರಿ! (ಕೂತಲ್ಲಿಯೇ ತಲೆಬಗ್ಗಿಸುವಳು. ಕೆಳಗಿದ್ದ ನೇತಾಜಿಯ ಚಿತ್ರವು ಕಾಣಿಸುವುದು.)

ಅಬ್ಬ! ಎಂತಹ ನಸಳನೋಟವಿದು!—ನೋಡು!—ಧೈರ್ಯವಿದ್ದರೆ ನನ್ನ ಮುಖವನ್ನೆ ನೋಡು! ದೀಕ್ಷಾಬದ್ಧಳಾದ ತಾರೆಯ ಮುಖವನ್ನು ನೋಡು! ಪ್ರತೀಕಾರ ಯಜ್ಞದ ಪಶು!-ಅಲ್ಲ, ಅಲ್ಲ! ಅಬ್ಬ ನೋಟವೇ! ಏನು ತೀಕ್ಷ್ಣವಪ್ಪಾ ಇದು? ನನ್ನ ಹೃದಯವನ್ನು ಕೊರೆದು ನನ್ನ ಅಂತರಂಗದಲ್ಲಿ ಲೀನವಾಗುತ್ತದಲ್ಲವೇ? ಈ ಪ್ರಭಾವವೆಲ್ಲಿಂದ ಈ ನೋಟಕ್ಕೆ!-ಇದು ಸಿರಪರಾಧಿತ್ವದ ಚಿಹ್ನೆಯಲ್ಲವೇ?

ಆದರೆ, ನನ್ನ ಪ್ರತಿಜ್ಞೆ! (ಗಟ್ಟಿಯಾಗಿ) ಅಯ್ಯೋ, ನನ್ನ ಪ್ರತಿಜ್ಞೆ!

**ಸ:**—"ಪ್ರತಿಜ್ಞೆಯ ನೆನಪಿರಲಿ;-ನೆಲೆಯರಿಯದೆ ಧುಮುಕಬೇಡ;-ಶೋಧನೆಯಾಗಲೇ ಬೇಕು".

**ತಾ:**—(ಫಕ್ಕನೆ ಹಿಂದಿರುಗಿ) ಯಾರದು? ಯಾರು? ಸಖಿ? ಏನೆಂದೆ? ಎಂತಹ ಪ್ರತಿಜ್ಞೆ?

**ಸ:**—ನಾನೇನು ಬಲ್ಲೆ? ನನ್ನನ್ನೇಕೆ ಕೇಳುವುದು?

**ತಾ:**—ಈಗ ನೀನು ಪ್ರತಿಜ್ಞೆಯೆಂದೆಯಲ್ಲ? ಈಗ ಹೇಳಿದುದು!

**ಸ:**—ಅದೇ? ನೀವು ಹೇಳಿದಿರೆಂದು ನಾನೂ ಹೇಳಿದೆನು.

**ತಾ:**—ನನ್ನ ಪ್ರತಿಜ್ಞೆಯೇನು, ನಿನಗೆ ಗೊತ್ತೋ?

**ಸ:**—ಊಹು! ನನಗೆ ಹೇಗೆ ಗೊತ್ತು? ನೇತಾಜಿನಾಯಕರನ್ನು ಕೇಳಬೇಕು.

**ತಾ:**—(ಕಣ್ಣು ಕೆರಳಿಸಿ) ಯಾರನ್ನು? ಯಾರನ್ನು ಕೇಳಬೇಕೆಂದೆ?

**ಸ:**—ಏನಮ್ಮ? ನನಗೆ ಭಯವಾಗುತ್ತದೆ.

**ತಾ:**—ಭಯ! ನನ್ನನ್ನು ನೋಡಿಯೇ ಭಯ!

**ಸ:**—ನಿಮ್ಮ ಆವೇಶದ ಮಾತುಗಳನ್ನು ಕೇಳಿ.

**ತಾ:**—ನಿಜ, ಸಖಿ! ನನಗೆ ಆವೇಶವಾಗಿದೆ.

**ಸ:**—ಅದೇ ನನಗೆ ಹೆದರಿಕೆ.

**ತಾ:**—ಆದರೆ, ಈಗ ಆವೇಶವಿಳಿಯಿತು—ಅದಿರಲಿ, ಸಖಿ. ನೀನೇನೋ ಕೆಲವು ಮಾತುಗಳನ್ನು ಹೇಳಿದೆಯಷ್ಟೆ!

**ಸ:**—ಹೌದಮ್ಮಾ!

**ತಾ:**—ಯಾವ ಮಾತುಗಳು ಅವು?

**ಸ:**—ಇನ್ನೊಮ್ಮೆ ಆವೇಶವಾದರೆ, ನಾನು ಹೇಳಿ, . . .

**ತಾ:**—ಛೀ! ಎಂತಹ ಹುಚ್ಚು?

**ಸ:**—ಒಮ್ಮೆಯಾದುದು ಇನ್ನೊಮ್ಮೆ ಆಗುವುದಿಲ್ಲವೆಂದು ನಾನು ಹೇಗೆ ನಂಬಲಿ?

**ತಾ:**—ಇಲ್ಲ, ಸಖಿ! ತಂದೆಯವರ ಅಪಮೃತ್ಯುವಿನ ವಿಷಯವನ್ನೆ ಆಲೋಚಿಸುತ್ತಾ ನನಗೆ ಸ್ವಲ್ಪ ಭ್ರಮೆಯಾಯಿತು; ಅಷ್ಟೆ!

**ಸ:**—ಹಾಗಾದರೆ ಧೈರ್ಯದಿಂದ ಹೇಳಬಹುದಲ್ಲ!

**ತಾ:**—ಏನೋ! ನನ್ನ ಮನಸ್ಸಿನಲ್ಲಿದ್ದ ವಿಚಾರವನ್ನೆ ನೀನು ಎತ್ತಿ ಹೇಳಿದಂತಾಯಿತು. ಅದೇ ಕೇಳಲಿಕ್ಕೆ ಕುತೂಹಲ.

**ಸ:**—ಅದು ನಿಜವಮ್ಮಾ!

**ತಾ:**—ಆವುದು?

**ಸ:**—ನಿಮ್ಮ ಮನಸ್ಸಿನಲ್ಲಿದ್ದ ವಿಚಾರವೆಂದುದು.

**ತಾ:**—ಅದು ನಿನಗೆ ಹೇಗೆ ಗೊತ್ತು?

**ಸ:**—ಅದೊಂದು ವಿದ್ಯೆ—ಬೇರೆಯವರ ಮನೋವೃತ್ತಿಯನ್ನೆ ತಿಳಿವುದು.

**ತಾ:**—ಅಬ್ಬ! ಬಹಳ ತಂತ್ರಗಾರ್ತಿ ನೀನು. ಆಗಲಿ, ಹೇಳಿಬಿಡು.

**ಸ:**—"ಪ್ರತಿಜ್ಞೆಯ ನೆನಪಿರಲಿ".

**ತಾ:**—ಅದನ್ನು ಪೂರೈಸಲಿಕ್ಕೆ ವಿಶ್ವಪ್ರಯತ್ನವನ್ನು ಮಾಡುತ್ತೇನೆ.

**ಸ:**—ಮಾಡಿರಿ—"ನೆಲೆಯರಿಯದೆ ಧುಮುಕಬಾರದು".

**ತಾ:**—ಛೀ! ನೆಲೆಯರಿವುದೇ? ವಿಚಾರ ಮೊದಲು, ಪ್ರತಿಜ್ಞೆ ಅನಂತರ.

**ಸ:**—ಧುಮುಕುವುದು ಆ ಮೇಲಷ್ಟೆ!

**ತಾ:**—ಆಗ ಧುಮುಕುವುದಲ್ಲ; ಕೆಲಸಕ್ಕೆ ಕೈಹಚ್ಚುವುದು.

**ಸ:**—ಹಾಗೆಯೇ ಮಾಡಿರಿ. "ಶೋಧನೆಯಾಗಲೇ ಬೇಕು".

**ತಾ:**—ಶೋಧನೆ! ಯಾವುದರ ಶೋಧನೆ?–ನನ್ನ ಅಂತರಂಗದಲ್ಲಿ ತರಂಗಗಳಂತೆ ಅಲೆದಾಡುವ ವಿಚಾರಗಳು ಇವು. ನನಗೆ ಹೊಸ ಚೈತನ್ಯವನ್ನುಂಟುಮಾಡಿದ ಮಾತುಗಳು. ನಿನಗೆ ಈ ಮಾತುಗಳನ್ನು ಹೇಳಿದುದು ಯಾರೇ?

**ಸ:**—ಯಾರಾದರೇನು? ಮಾತುಗಳು ನಿಮ್ಮ ಮನಸ್ಸಿನಲ್ಲಿದ್ದವುಗಳಷ್ಟೆ!

**ತಾ:**—ಆದರೆ, ನಿನಗೆ ಈ ವಿಚಾರಗಳು ತಿಳಿವಂತೆ ಇಲ್ಲ.

**ಸ:**—ಛೀ! ನನಗೆ ಹೇಗೆ ತಿಳಿಯಬೇಕು?

**ತಾ:**—ಹಾಗಾದರೆ, ನಿನಗೆ ಕಲಿಸಿಕೊಟ್ಟವರಾರು?

**ಸ:**—ನಿಮ್ಮ ಹೃದಯದಲ್ಲಿ ನೆಲಸಿದವರ ಮಾತು.

**ತಾ:**—ನೆಲಸಿದವರು! ಹೂಂ! ಯಾರೇ?

**ಸ:**—ಅಲ್ಲಮ್ಮಾ! ಮನೆಮಾಡಿದವರು.

**ತಾ:**—ಛೀ! ನನ್ನ ಅಂತರಂಗದಲ್ಲಿ ಯಾರಿಗೂ ಸ್ಥಾನವಿಲ್ಲ.

**ಸ:**—ಹಾಗಾದರೆ ಕಳ್ಳತನದಿಂದ ಒಳಹೊಕ್ಕು ನಿಮ್ಮ ಅಂತರಂಗವನ್ನು ತಿಳಿದಿರಬೇಕು.

**ತಾ:**—ಯಾರೇ ಹೇಳಿದುದು?

**ಸ:**—ಸಿಟ್ಟಿಲ್ಲವಷ್ಟೆ?

**ತಾ:**—ಸಿಟ್ಟೇ? (ನಕ್ಕು)–ಏನು ಹುಚ್ಚು ನಿನಗೆ?

**ಸ:**—ಆವೇಶವಾಗಬಹುದೋ ಇನ್ನೊಮ್ಮೆ?

**ತಾ:**—ಛೀ! ನನ್ನನ್ನು ಕಾಡುತ್ತೀಯಾ, ಸಖಿ?

**ಸ:**—ನೇತಾಜಿನಾಯಕರ ಮಾತುಗಳನ್ನೆ ನಾನು ಹೇಳಿದುದು.

**ತಾ:**—(**ಕಣ್ಣರಳಿಸಿ, ಪುನಃ ಮುಚ್ಚಿ, ಮೌನವಾಗಿ ಕುಳಿತುಕೊಳ್ಳುತ್ತಾಳೆ.**)

**ಸ:**—ಬೇಡವೆಂದರೆ ಹೆಸರನ್ನು ಕೇಳಿದಿರಿ. ಈಗ ಪುನಃ ಆರಂಭವಾಯಿತು.

**ತಾ:**—(ಮೌನ.)

**ಸ:**—ನಾನು ಹೇಳಿದೆ ಅವರಿಗೆ! ಅಮ್ಮನವರು ನೇತಾಜಿನಾಯಕರನ್ನು ದ್ವೇಷಿಸುತ್ತಾರೆ; ಇನ್ನುಮುಂದೆ ಅವರ ವಿಚಾರವನ್ನು ನಿಮ್ಮೆದಿರಲ್ಲಿ ಆಡಲಾರೆನೆಂದು.

**ತಾ:**—ನಾನವರನ್ನು ದ್ವೇಷಿಸುತ್ತೇನೆಂದು ಯಾರಿ ಹೇಳಿದುದು ನಿನಗೆ?

**ಸ:**—ನಿಮ್ಮ ಚರ್ಯೆಯಿಂದ ತಿಳಿವುದಿಲ್ಲವೇನಮ್ಮಾ?

**ತಾ:**—ಏನೋ, ಸಖಿ! ಮನಸ್ಸಿನಲ್ಲಿ ಶಾಂತಿಯೆಂಬುದಿಲ್ಲ.—ಊಹಾಪೋಹಗಳು ನನ್ನ ಬುದ್ಧಿಯನ್ನು ತಳಮಳಗೊಳಿಸುತ್ತವೆ. ನನ್ನ ಮುಂದಿನ ಕರ್ತವ್ಯವನ್ನೆ ತಿಳಿಯಲಾರೆನು.

**ಸ:**—ಅದಕ್ಕೆಯೆ ನೇತಾಜಿನಾಯಕರು ಸಂದೇಶವನ್ನು ಕಳುಹಿಸಿದುದು.

**ತಾ:**—(ಆಲೋಚಿಸಿ)-ನಿಜ! ಅವರ ಮೇಲಿನ ಅಪವಾದವನ್ನು ಕೂಡಲೆ ನಂಬುವುದಿಲ್ಲವೆಂದು ಮಾತುಕೊಟ್ಟಿದ್ದೇನೆ. ಅಯ್ಯೋ! ವಿಚಾರ ಶಕ್ತಿಯಿದ್ದರಲ್ಲವೆ ನೆಲೆಯರಿವುದು, ಶೋಧಿಸುವುದು?–

ಆಗಲಿ ಅವರಿಗೇಕೆ ನನ್ನಿಂದ ಅಪಕಾರವಾಗಬೇಕು. "ಕರ್ಮಕ್ಕೆ ತಕ್ಕ ಫಲ"ವೆಂದಲ್ಲವೆ ಅವರ ತತ್ವ.

**ಸ:**—ಅಮ್ಮಾ! ದುಡುಕಬಾರದು. ಅವಸರದಲ್ಲಿ ಯಾವುದೊಂದು ಕೆಲಸವನ್ನೂ ಮಾಡಬಾರದು.

**ತಾ:**—ಹೂಂ! ಇನ್ನೂ ವಿಚಾರಿಸುತ್ತೇನೆ, ಸಖಿ! ನೀನೀಗ ಹೊರಟು ಹೋಗು. ತಂದೆಯವರ ಚಿತ್ರವನ್ನೆ ನೋಡುತ್ತ ಕುಳಿತರೆ ನನಗೆ ಸಮಾಧಾನವಾಗುವುದು.-ಹೂಂ!-ಹೇಳು ನಿನ್ನಗಂಡನ ಹತ್ತಿರ. ಹೇಗೂ–ನನ್ನಿಂದ ಅವರಿಗೆ ಅಪಕಾರವಾಗದು. (ಸಖಿ ಹೊರಟು ಹೋಗುತ್ತಾಳೆ.)

(ಅವಳನ್ನು ಕರೆದು), ಸಖಿ! ಹೇ ಸಖಿ! ನೇತಾಜಿನಾಯಕರೆಲ್ಲಿದ್ದಾರಂತೆ? ಸುಖದಲ್ಲಿದ್ದಾರೆಯೇ? ಇಲ್ಲಿಯ ವಿಷಮಸ್ಥಿತಿಯನ್ನು ತಿಳಿದಿದ್ದಾರೆಯೇ?

**ಸ:**—(ಬಾಗಿಲ ಬಳಿ ಹಿಂದಿರುಗಿ ನಿಂತು) ಅವರು ಪುರಂದರಗಡದಲ್ಲಿ ಸುಖದಲ್ಲಿದ್ದಾರೆ. ಇಲ್ಲಿಯ ದುಃಸ್ಥಿತಿಯನ್ನು ತಿಳಿದಿದ್ದಾರೆ. ಇದರ ಕಾರಣವನ್ನು ತಿಳಿವ ಪ್ರಯತ್ನದಲ್ಲಿದ್ದಾರೆ

**ತಾ:**—ಹೂಂ- ಆಗಲಿ. ನಾನು ಅವರನ್ನು ವಿಚಾರಿಸಿದೆನೆಂಬ ವಿಷಯವು ಅವರಿಗೆ ತಿಳಿಯಬೇಕೆಂದಿಲ್ಲ. ಹೋಗು. (ಸಖಿ ಹೋಗುತ್ತಾಳೆ.)

(ತಾರೆ ಅಲ್ಲಿಯೇ ಚಿತ್ರವನ್ನು ನೋಡುತ್ತಾ ತಲೆಗೆ ಕೈಹಿಡಿದುಕೊಂಡು ಕುಳಿತುಕೊಳ್ಳುತ್ತಾಳೆ.)

---

## ದೃಶ್ಯ ೫

(ವಿಶಾಲಗಡ; ಅರಮನೆ; ತಾರೆಯ ಅಂತಃಪುರ.
ತಾರೆ, ರಘುನಾಥರಾಯ ಮತ್ತು ಖಂಡೋಜಿ ಇವರು ಕುಳಿತಿದ್ದಾರೆ.)

**ತಾ:** — ನನ್ನ ಸಂಕಲ್ಪವು ದೃಢವಾದುದು; ಪ್ರತಿಜ್ಞೆ ಅಚಲವಾದುದು.

**ಖಂ:** — ಪ್ರತಿಜ್ಞೆ ಶ್ಲಾಘನೀಯವೇ? ಆದರೆ, ಸಾಧಿಸುವ ಕ್ರಮವು ಮಾತ್ರ ಅಯೋಗ್ಯವು.

**ತಾ:** — ಅದೇನೋ! ನಾನರಿಯೆ. ತಂದೆಯವರ ಆತ್ಮವು ನನ್ನನ್ನು ಅರಣ್ಯಕ್ಕೆ ಕರೆಯುತ್ತಿದೆ. ನಿನ್ನೆ ರಾತ್ರಿ ಅವರು ಕನಸಿನಲ್ಲಿ ಕಾಣಿಸಿಕೊಂಡರು. (ಅಳುವಳು) ನನಗೇನೋ ಅವರು ಮೃತಿ ಹೊಂದಿದ ಸ್ಥಳವನ್ನು ನೋಡಬೇಕೆಂದೂ ಅಲ್ಲಿಯೇ ಸೇಡಿನ ಯಜ್ಞವನ್ನು ಪೂರ್ತಿಗೊಳಿಸಬೇಕೆಂದೂ ಆಶೆ. ಇದು ದಿನೇ ದಿನೇ ಹೆಚ್ಚುತ್ತಿದೆ. ಇನ್ನು ನಾನು ತಡೆಯಲಾರೆನು!

**ಖಂ:** — (ಆತ್ಮಗತ) — ಅಯ್ಯೋ! ಇವಳ ಹಟಮಾರಿತನವೇ ನನ್ನ ಕಾರ್ಯ ಕ್ರಮವನ್ನೆಲ್ಲ ಹಾಳುಮಾಡುವುದು.

**ರ:** — ಮಗೂ! ಪರಿವಾರದವರೊಡನೆ ನೀನೊಮ್ಮೆ ಅಲ್ಲಿಗೆ ಹೋಗಿ ಬಾ! ಅಣ್ಣನು ಸತ್ತ ಸ್ಥಳದಲ್ಲಿ ಯೋಗ್ಯ ಸಮಾಧಿಯನ್ನು ರಚಿಸ ಲಿಕ್ಕೆ ಇಂದೇ ಆಜ್ಞೆಯನ್ನು ಕೊಡುವ. ಆದರೆ, ತಾರೆ! ನೀನು ಹಿಂದಿರುಗಬೇಕು. ಇಲ್ಲವಾದರೆ ನಮ್ಮ ರಾಜ್ಯದ ಗತಿ?

**ತಾ:** — ಚಿಕ್ಕಪ್ಪಾ! ನನಗೆ ರಾಜ್ಯವೂ ಬೇಡ; ಅಧಿಕಾರವೂ ಬೇಡ. ಈ ರಾಜ್ಯಕ್ಕೆ ನೀವೇ ಇನ್ನುಮುಂದಿನ ಅಧಿಕಾರಿಗಳು. ಆಡಳಿ ತಕ್ಕೆ ಬೇಕಾದ ಸುವ್ಯವಸ್ಥೆಯನ್ನು ಮಾಡಿ, ಸಾಧ್ಯವಿದ್ದರೆ ನಮ ಗಾದ ಅಪಮಾನವನ್ನು ತೊಳೆಯಲು ಪ್ರಯತ್ನಿಸಿರಿ. ನಾನು

ತಂದೆಯುವರ ಅಂತ್ಯಕ್ರಿಯೆಯಾದ ಸ್ಥಳದಲ್ಲಿಯೇ ನನ್ನ ಯಜ್ಞವನ್ನು ಮಾಡುವೆನು. ಆಮೇಲೆ ಅಲ್ಲಿಯೇ ಸಮಾಧಿಯನ್ನು ರಚಿಸುವೆನು. ತಂದೆಯುವರ ಆತ್ಮಕ್ಕೆ ಶಾಂತಿಯನ್ನೊದಗಿಸುವೆನು.

**ಖಂ:**—(ಆತ್ಮಗತ)-ಇವಳಿಗೆ ರಾಜ್ಯವು ಬೇಡ. ಆದರೆ, ನನಗೆ ಬೇಕಲ್ಲ!-ಹೇಗೂ ಇವಳ ಅಭಿಪ್ರಾಯದಂತೆಯೇ ವರ್ತಿಸಬೇಕು; ಇಲ್ಲವಾದರೆ ಕಾರ್ಯಹಾನಿ.

(ಪ್ರಕಾಶ) ಆಗಲಿ; ಒಂದಲ್ಲ ಎರಡು ರೀತಿಯಲ್ಲಿ ಶತ್ರುವಿನ ವಿನಾಶಕ್ಕೆ ಪ್ರಯತ್ನಿಸಿದಂತಾಗುವುದು. ಸೇನೆಯನ್ನು ಕೂಡಿಸಿ ಬಲಾತ್ಕಾರದಿಂದ ಶಿವಾಜಿಯನ್ನು ಹಣ್ಣುಮಾಡುವುದೊಂದು; ಕುಹಕೋಪಾಯದಿಂದ ಅವನನ್ನು ಕೊಲ್ಲಲಿಕ್ಕೆ ಪ್ರಯತ್ನಿಸುವುದೊಂದು.

**ರ:**—ಏನು? ಅರಣ್ಯಮಧ್ಯದಲ್ಲಿದ್ದುಕೊಂಡೇ ಅವನನ್ನು ಕೊಲ್ಲಲಿಕ್ಕೆ ಪ್ರಯತ್ನಿಸುವುದೇ? ಕಾಡಿನಲ್ಲಿ ಹಿಂಸ್ರಮೃಗದಂತೆ ರೂಪಾಂತರ ಹೊಂದಬೇಕು.

**ತಾ:**—ಅದೇಕೆ? ತಕ್ಕ ಹಂಚಿಕೆಯನ್ನು ಹುಡುಕಬೇಕು.

**ಖಂ:**—ಅದೇನೋ ಸುಲಭವೇ! ಶಿವಾಜಿಗೆ ಯೋಗಿಗಳಲ್ಲಿ ಬಹಳ ವಿಶ್ವಾಸ; ಅಂಧಶ್ರದ್ಧೆ. ಮಹಾಯೋಗಿಗಳೊಬ್ಬರು ಅವನ ಪ್ರಾಂತ್ಯದಲ್ಲಿ ತಪಸ್ಸನ್ನಾಚರಿಸುತ್ತಿದ್ದಾರೆಂದು ತಿಳಿದರೆ ಅವನು ನಿಜವಾಗಿಯೂ ಅವರ ಭೇಟಿಗೆಂದು ಬರುವನು. ಆಗ ನಮ್ಮ ಕಾರ್ಯವನ್ನು ಸಾಧಿಸಬಹುದು.

**ತಾ:**—ಅದೀಗ. ನಾನು ಇಂದೇ ಗೋಸಾವಿಯ ವೇಷಧರಿಸಿ ತಪಸ್ಸನ್ನಾಚರಿಸಲು ಪ್ರಾರಂಭಿಸುತ್ತೇನೆ.

**ರ:**—ಅಯ್ಯೋ! ತಾರೆ! ನೀನು ಚಿಕ್ಕವಳಲ್ಲವೇ? ಕಾಡಿನಲ್ಲಿರುವುದು ಹೇಗೆ? ತಪಸ್ಸೆಂದರೆ ಅಷ್ಟು ಸುಲಭವೇ?

**ತಾ:**—ಚಿಕ್ಕಪ್ಪಾ! ತಂದೆಯುವರ ಆತ್ಮತೃಪ್ತಿಯಾಗದೆ ಸುಖೋಪಭೋಗ ವಸ್ತುಗಳನ್ನು ಕಣ್ಣೆತ್ತಿಯೂ ನೋಡುವುದಿಲ್ಲವೆಂದು ಈ ಮೊದಲೆ ಸಂಕಲ್ಪಿಸಿದ್ದೇನೆ. ಇಲ್ಲಿದ್ದರೂ ನಾನು ಯೋಗಿನಿಯಂತೆಯೇ ಇರಬೇಕು. ನನ್ನ ಜೀವನಕ್ರಮವು ವ್ಯತ್ಯಾಸವಾಗಿದೆ.

**ರ:**—ಏನೋ ಮಗು! ಆ ಶಿವಾಜಿಯಲ್ಲಿ ಭಕ್ತಿಗೌರವವನ್ನುಂಟು ಮಾಡಲಿಕ್ಕೆ ತಪಃಪ್ರಭಾವವಿಲ್ಲದಿದ್ದರೆ ಚಾತುರ್ಯವಾದರೂ ಬೇಕಷ್ಟೆ?—ಇದು ನಿನ್ನಿಂದ ಹೇಗೆ ಸಾಧ್ಯವೋ!

**ತಾ:**—ನನ್ನ ಹೃದಯದ ಸ್ಥಿತಿಯನ್ನು ನೀವು ಅರಿತಿಲ್ಲ.

**ಖಂ:**—ಮಾವಾ! ಅವಳೊಬ್ಬಳೆ ಅಲ್ಲಿರುವುದಲ್ಲ. ನೀವಾಗಲಿ ನಾನಾಗಲಿ ಅವಳ ಜತೆಯಲ್ಲಿರಬೇಕು. ಅಲ್ಲದೆ ನಮ್ಮ ಪಂಗಡದ ಕೆಲವು ಆಳುಗಳು ಸಮೀಪದಲ್ಲಿಯೇ ಇದ್ದುಕೊಂಡು ನಮಗೆ ಸೌಕರ್ಯಗಳನ್ನೊದಗಿಸುತ್ತಿರಬೇಕು.

**ರ:**—ಹಾಗೆ ನಾವು ಒಮ್ಮಿಂದೊಮ್ಮೆ ಹೊರಟುಹೋದರೆ ಜನರೇನೆಂದಾರು? ಈ ವಿಷಯವು ಶಿವಾಜಿಗೆ ತಿಳಿವುದಿಲ್ಲವೇ?

**ತಾ:**—ಅದಕ್ಕೆಯೇ ನಾನೊಬ್ಬಳೆ ಹೋಗುತ್ತೇನೆಂದುದು.

**ಖಂ:**—ತಂಗೀ! ನೀನು ಹೋಗಬೇಕೆಂಬುದು ನಿಜ. ಆದರೆ ಒಬ್ಬಳಲ್ಲ.

**ರ:**—ಓಹೋ! ನಾನು ಜತೆಯಲ್ಲಿ ಹೋಗಲಿಕ್ಕೆ ಸಿದ್ಧನಿದ್ದೇನೆ. (ಆತ್ಮಗತ.) ನನಗೀ ರಾಜ್ಯಕಾರ್ಯದ ಸಂಕಷ್ಟವೇ ಬೇಡ!

**ಖಂ:**—(ಆತ್ಮಗತ) ಬಹಳ ಪ್ರಶಸ್ತವಾಯಿತು ನೀವು ಹೋದರೆ.

(ಪ್ರಕಾಶ) ನೀವಿಬ್ಬರೂ ಹೊರಟುಹೋದರೆ ಈ ರಾಜ್ಯವನ್ನು ಆಳುವುದಾರು?

**ರ:**—ತಾರೆಯ ಪರವಾಗಿ ಎಲ್ಲ ವ್ಯವಸ್ಥೆಯನ್ನು ನೀನೇ ಮಾಡಬೇಕು.

**ತಾ:**—(ಆತ್ಮಗತ) ಖಂಡೋಜಿ ನನ್ನ ಜತೆಯಲ್ಲಿರಬಾರದು. ಇದೇ ಉಪಾಯ.

(ಪ್ರಕಾಶ) ಅಣ್ಣಾ!-ತಂದೆಯವರ ಅಕಾಲಮರಣದಿಂದ ಪ್ರಜೆಗಳಿಗೆ ಉಪದ್ರವವಾಗಬಾರದು. ಅಲ್ಲದೆ, ಅವರ ದುರ್ವ್ಯಸನಗಳ ಚಟದಿಂದ ಇತ್ತೀಚೆಗೆ ಪ್ರಜೆಗಳು ಬಹಳ ಕಷ್ಟಕ್ಕೊಳಗಾಗಿದ್ದರು. ನಮ್ಮ ಪ್ರಜೆಗಳ ಸುಖಜೀವನಕ್ಕೆ ಬೇಕಾದ ಸುವ್ಯವಸ್ಥೆಯನ್ನು ನಾವು ಮಾಡಲೇಬೇಕು. ಅದಕ್ಕೆ ನೀನೇ ಸಮರ್ಥನು. ನೇಡಿನ ವಿಚಾರ ಆ ಮೇಲೆ.

**ಖಂ:**—ಆಹಾ! ಹಾ! ಮಾವಯ್ಯನವರೂ ನೀನೂ ಇರುವಾಗ ನನಗೇನು ಅಧಿಕಾರವೋ ಈ ರಾಜ್ಯದಲ್ಲಿ!

**ರ:—** ಅಣ್ಣನ ಮರಣದ ಅನಂತರ ತಾರೆಯೇ ಈ ರಾಜ್ಯಕ್ಕೆ ಸಹಜವಾಗಿ ಅಧಿಕಾರಿಣಿ. ನಾನೂ ಅವಳ ಅಪ್ಪಣೆಯಂತೆ ನಡೆಯಬೇಕು.

**ಖಂ:—**(ಆತ್ಮಗತ) ಆಗಲಿ; ಈ ಪೀಡೆ ಬಹು ಸುಲಭದಲ್ಲಿ ಕೊನಗೊಂಡಿತು.

(ಪ್ರಕಾಶ) ನಾನೂ ಹಾಗೆಯೇ? ಆಜ್ಞೆಗೆ ವಿಧೇಯನಾದ ಸೇವಕನು.

**ರ:—** ಪ್ರಜೆಗಳಿಗೆ ಮನವೊಪ್ಪುವಂತೆ ತಾರೆಯೇ ನಿನಗೆ ಅಧಿಕಾರವನ್ನು ಕೊಡಬಹುದು. ನೀನು ಅವಳ ಪ್ರತಿನಿಧಿಯಾಗಿ ಆಳುತ್ತಿರು.

**ಖಂ:—** ಹೂಂ! ಅಪ್ಪಣೆಯಾದರೆ; ಬೇರೆ ಉಪಾಯವಿಲ್ಲ.

**ತಾ:—** ಓಹೋ! ನನ್ನ ಒಪ್ಪಿಗೆಯೇ? ನಾನು ತಪಸ್ಸನ್ನಾಚರಿಸಲಿಕ್ಕೆ ಕಾಡಿಗೆ ಹೋಗುತ್ತೇನೆಂದು ನಾಳೆಯೇ ಡಂಗುರ ಹೊಡೆಯಿಸುತ್ತೇನೆ.

**ಖಂ:—** ಸರಿ ಸರಿ! ಬಹಳ ಚೆಂದವಾಯಿತು; ನಾನು ನಿಮ್ಮ ಬೆನ್ನು ಹಿಡಿದು ಬರುತ್ತೇನೆ.

**ರ:—** ಹಾಗಲ್ಲ; ಪ್ರಜಾಪ್ರಮುಖರ ಸಭೆಯಲ್ಲಿ ತಾರೆ ನಿನ್ನನ್ನು ತನ್ನ ಪ್ರತಿನಿಧಿಯಾಗಿ ನಿಯಮಿಸಲಿ. ಆ ಮೇಲೆ ಅವಳು ಹೊರಟು ಹೋಗಲಿ.

**ಖಂ:—** ಬೇಡ! ನನಗೇಕೆ ಈ ರಾಜ್ಯದ ಗೊಡವೆ? ನನಗೆ ಅಧಿಕಾರವು ಬೇಡ. ನಾನು ನಿಮ್ಮ ಜತೆಯಲ್ಲಿಯೇ ಹೊರಡುತ್ತೇನೆ.

**ರ:—** ಹಾಗೆಂದರೆ? ರಾಜ್ಯದ ಅವಸ್ಥೆಯೇನು ಖಂಡ್ಯಾ?

**ಖಂ:—** ಮೊದಲು ಅವ್ಯವಸ್ಥೆ; ಆ ಮೇಲೆ ಕ್ರಾಂತಿಯುಂಟಾಗುತ್ತದೆ. ಶಿವಾಜಿ ರಾಜನಾಗುತ್ತಾನೆ. ಹಾಗಾದರೆ, ಮಾವಯ್ಯನವರ ದು[illegible]ರಣಕ್ಕೆ ತಕ್ಕ ಪ್ರತೀಕಾರವಾಗುವುದು.

**ತಾ:—**(ಕಣ್ಣು ಕೆರಳಿಸಿ)—ಛೀ! ಹಾಗಾಗಕೂಡದು.

**ಖಂ:—** ನಿಮ್ಮ ಸೂಚನೆಯಂತೆ ನಡೆದರೆ ಅದೇ ಗತಿ.

**ತಾ:—** ಅದೇನು ಸ್ವಾಮಿನಿಷ್ಠ ನಾಯಕರಿಲ್ಲವೇ ನಮ್ಮ ಆಶ್ರಯದಲ್ಲಿ?

**ಖಂ:—** ಸ್ವಾಮಿನಿಯಿದ್ದರಲ್ಲವೇ ನಿಷ್ಠೆ! ನೀನೇ ತಪಸ್ಸನ್ನಾಚರಿಸುವುದಿದ್ದರೆ ಅವರು ಬೇರೆ ಸ್ವಾಮಿಯನ್ನರಸಬಹುದು.

**ರ:**— ಇದು ನಿಜ! ಇದಕ್ಕೇನುಪಾಯ?

**ತಾ:**— ರಾಜನೀತಿಜ್ಞರು ನೀವು; ನನ್ನನ್ನು ಕೇಳುವುದೇ?

**ಖಂ:**— ಉಪಾಯವಿದೆಯಷ್ಟೆ! ಆದರೆ ನನ್ನ ಸೂಚನೆಯನ್ನು ನೀವು ಅನ್ಯಥಾ ಭಾವಿಸಬಾರದು.

**ತಾ:**— ಅಣ್ಣಾ! ಹೀಗೂ ಸಂಶಯವೇ?

**ರ:**— ನಿನ್ನ ಮಾತನ್ನು ಅಲ್ಲಗಳೆದವರಾರು?

**ಖಂ:**— ಹೀಗೆ ಮಾಡಬೇಕು-'ಮಾವಯ್ಯನವರ ಆತ್ಮಶಾಂತಿಗೋಸ್ಕರ ನೀವಿಬ್ಬರೂ ಯಾತ್ರಾರ್ಥಿಗಳಾಗಿ ಹೊರಡುವುದು; ನನ್ನನ್ನು ನಿಮ್ಮ ಪ್ರತಿನಿಧಿಯಾಗಿ ಅಧಿಕಾರದಲ್ಲಿಡುವುದು. ನೀವು ಜಾವಳಿಯ ಅರಣ್ಯವನ್ನು ಗುಟ್ಟಾಗಿ ಸೇರಿಕೊಂಡು ಸಂನ್ಯಾಸಿಗಳಂತೆ ನಟಿಸುತ್ತಿರುವುದು'— ಹೀಗೆ ಮಾಡಿದರೆ ಪ್ರಜೆಗಳಿಗೆ ಸಂದೇಹವುಂಟಾಗಲಿಕ್ಕಿಲ್ಲ. ಅವರ ಸ್ವಾಮಿನಿಷ್ಠೆ ಮತ್ತಷ್ಟೂ ಹೆಚ್ಚುವುದು. ಅಲ್ಲದೆ ಅರಣ್ಯದಲ್ಲಿ ನಡೆಯಬೇಕಾದ ಕುತಂತ್ರವೂ ಗುಪ್ತವಾಗಿರುವುದು.

**ರ:**— ಶಹಭಾಸ್! ಇದೀಗ ಉಪಾಯವೆಂದರೆ!

**ತಾ:**— ಅಣ್ಣನು ಬಹಳ ಚಾಣಾಕ್ಷನಲ್ಲವೇ?

**ಖಂ:**— ವಿಶ್ವಾಸಪಾತ್ರರಾದ ಸೇವಕರನ್ನು ಅಲ್ಲಿ ನಿಲ್ಲಿಸಿಕೊಂಡು ಮಾಡಬೇಕಾದ ಕಾರ್ಯಭಾಗವೂ ಇದೆ.

**ತಾ:**— ಅಣ್ಣಾ! ನೀನು ಹೇಳಿದಂತೆ ಮಾಡಿದರೆ ನನ್ನ ಬಯಕೆ ನೆರವೇರುವುದರಲ್ಲಿ ಸಂದೇಹವಿಲ್ಲ.

**ಖಂ:**— ನಮ್ಮ ಕಾರ್ಯಸಾಧನೆಗೆ ತಕ್ಕ ಹಂಚಿಕೆಗಳನ್ನು ಹೂಡುವುದು ನನ್ನ ಪಾಲಿನದು. ಅವನ್ನು ಅನುಮೋದಿಸುವುದೂ ಬಿಡುವುದೂ ನಿಮ್ಮ ಕೈಯಲ್ಲಿದೆ.

**ತಾ:**— ಎಂದರೆ, ನಾಳೆಯೇ ಯಾತ್ರೆಯ ವಿಚಾರವನ್ನು ಬಹಿರಂಗಪಡಿಸುವುದಲ್ಲವೇ?

**ಖಂ:**— ಹೌದು; ನಾಡಿದು ವಿಜಯದಶಮಿಯ ದಿವಸ ಶುಭಮುಹೂರ್ತದಲ್ಲಿ ನೀವು ಯಾತ್ರಾರ್ಥಿಗಳಾಗಿ ಹೊರಡುತ್ತೀರೆಂದು ತಿಳಿಸಿಬಿಡುವುದು.

**ತಾ:**—ನನ್ನ ಒಪ್ಪಿಗೆ.

**ರ:**—ಹಾಗೆಯೇ! ಒಂದೆರಡು ತಿಂಗಳ ವರೆಗೆ ಸಂನ್ಯಾಸಿಗಳ ರೀತಿ ನೀತಿಗಳನ್ನು ಅಭ್ಯಾಸಿಸಿ ನಮ್ಮ ಕಾಪಟ್ಯವನ್ನು ಅಡಗಿಸಲಿಕ್ಕೆ ಪ್ರಯತ್ನಿಸುವುದು.

**ಖಂ:**—ಅಷ್ಟೇ ಅಲ್ಲ; ಮಾವಾ! ನಮ್ಮ ನಾಡಿಂದ ನಾನೂ ಇನ್ನಿತರರೂ ಆಗಾಗ ಆಶ್ರಮಕ್ಕೆ ಹೋಗಿಬರುತ್ತಾ ಸಂನ್ಯಾಸಿಗಳ ಪ್ರಭಾವವನ್ನು ಹೆಚ್ಚಿಸಬೇಕು.

**ತಾ:**—ಆಗ ಮಾತ್ರ, ಶಿವಾಜಿಯು ವರೆಗೆ ವರ್ತಮಾನವು ಹೋಗಿ ಅವನೂ ಬರಬಹುದು; ನಮ್ಮ ಬಲೆಯೊಳಗೆ ಬೀಳಬಹುದು.

**ರ:**—ಆದರೆ, ಖಂಡ್ಯಾ! ಈ ಕೆಲಸವೆಲ್ಲ ನಿನ್ನಿಂದ ಮಾತ್ರ ಸಾಧ್ಯ.

**ಖಂ:**—ಮಾವಾ! ರಾಜ್ಯದ ಗೊಡವೆಯೇ ನಿಮಗೆ ಬೇಡ. ಆಶ್ರಮದಲ್ಲಿ ಮಾಡಬೇಕಾದ ಕೆಲಸಗಳ, ಪೂರ್ವಸಿದ್ಧತೆಗಳ ವಿಷಯ ಆಲೋಚಿಸಿ ನಿಮಗೆ ತಿಳಿಸುತ್ತೇನೆ. ಯೋಗ್ಯರಾದ ಸಂನ್ಯಾಸಿಗಳಂತೆ ನಟಿಸುವುದು ಮಾತ್ರ ನಿಮ್ಮ ಪಾಲಿನದು.

**ತಾ:**—ಅಣ್ಣಾ! ನಿನ್ನ **ಹೇ**ಳಿಕೆಯಂತೆಯೇ ನಾವು ನಡೆಯುತ್ತೇವೆ.

**ಖಂ:**—ಆದರೆ, ಕಾಡಿಗೆ ಹೋಗುವಾಗ ಜತೆಯಲ್ಲಿ ಸೇವಕರು ಬೇಡವೆ ನಿಮ್ಮ ಚಾಕರಿಗೆ?

**ತಾ:**—ನನ್ನ ಚಾಕರಿಗೆ ಇದ್ದಾಳಲ್ಲ ನನ್ನ ಸಖು! ಮಾವಯ್ಯನವರ ಕೆಲಸಕ್ಕೆ—ಆ 'ಸಂಗ'ನನ್ನು ಕರೆದುಕೊಂಡು ಹೋದರಾಯಿತು.

**ಖಂ:**—ಊಹು! ಸಖುವನ್ನು ಎಂದೂ ಕರೆದುಕೊಂಡು ಹೋಗಬಾರದು. ಆವಳಲ್ಲಿದ್ದರೆ ನಮ್ಮ ಗುಟ್ಟು ಬಯಲಾಗಲಿಕ್ಕೆ ತಡವಿಲ್ಲ. ನಿನ್ನ ವೆಂಕುವನ್ನು ಕರೆದುಕೊಂಡು ಹೋಗುವುದೇ ಒಳ್ಳೆಯದು.
(ಓರೆನೋಟದಿಂದ ರಘುನಾಥರಾಯನನ್ನು ನೋಡಿ ಮುಗುಳ್ನಗೆ ನಗುತ್ತಾನೆ.)

**ರ:**—(ಸಂತೋಷದಿಂದ) ಖಂಡ್ಯಾನ ಮಾತು ನಿಜ; ವೆಂಕುವನ್ನು ಎಂತಹ ರಹಸ್ಯವಿಷಯದಲ್ಲಿಯೂ ನಂಬಬಹುದು.

**ತಾ:**—ಆಗಲಿ, ಯಾರಾದರೇನು? ನನ್ನ ಕೆಲಸವೇನೂ ಹೆಚ್ಚಿಲ್ಲ! ಸಂನ್ಯಾಸಿನಿಯಾಗಿ ನನ್ನಕೆಲಸಗಳನ್ನುನಾನೇ ಮಾಡಿಕೊಳ್ಳುವೆನು.

**ಖಂ:**—ಆದರೂ ಸೇವಕರಿರಬೇಕು; ಅಲ್ಲದೆ ತಕ್ಕ ಸಿದ್ಧತೆಗಳನ್ನು ಮಾಡಲಿಕ್ಕೆ ಇಂದೇ ಆರಂಭಿಸಬೇಕು. ಆಗಲಿ, ನನಗೆ ಅಪ್ಪಣೆಯಾಗಲಿ.

**ರ:**—ಓಹೋ! ನಾನೂ ಹೊರಟೆ. ಸರಿ, ತಾರೇ! ಈಗಾದರೂ ನಿನಗೆ ಸಮಾಧಾನವಾಯಿತಷ್ಟೆ?

**ತಾ:**—ನನ್ನ ಪ್ರತಿಜ್ಞೆ ನೆರವೇರಿದಂದು ಸಂಪೂರ್ಣ ಸಮಾಧಾನ. ಆಗಲಿ, ನನ್ನ ಕೆಲಸವು ಕೈಗೂಡುವಂತೆ ಸಹಾಯಮಾಡುವ ಭಾರವು ನಿಮ್ಮಿಬ್ಬರ ಮೇಲೆ.

---

# ಅಂಕ ೪

## ದೃಶ್ಯ ೧

(ಜಾವಳಿಪ್ರಾಂತ್ಯದ ಒಂದು ಹಳ್ಳಿ—
ಒಂದು ಗುಡಿಸಿಲಿನ ಇದಿರಲ್ಲಿ ಒಬ್ಬ ಬಡರೈತನು ಮತ್ತು ಇಬ್ಬರು ಸೈನಿಕರು.)

**ರೈತ:**—ನನ್ನೊಡೆಯ! ನಾನಿನ್ನೇನು ಕೊಡಲಿ? ಬಡವರ ಗೋಳು, ಯಾರು ಕೇಳಬೇಕು?

**೧. ಸೈನಿಕ:**—ಬಡವರು—ಗೊತ್ತಿದೆ, ನಿಮ್ಮ ಠಕ್ಕು!

**ರೈತ:**—ಬುದ್ಧೀ! ಮೊನ್ನೆ, ಮೊನ್ನೆ ತಾನೆ ನನ್ನಲ್ಲಿದ್ದ ದವಸ ಧಾನ್ಯಗಳನ್ನೆಲ್ಲಾ ದೋಚಿಕೊಂಡು ಹೋದರು. ನನ್ನ ಹೆಂಡತಿ ಮಕ್ಕಳಿಗೆ ಉಣ್ಣಲಿಕ್ಕೆ ಗತಿಯಿಲ್ಲ.

**೧. ಸೈನಿಕ:**—ಚೆನ್ನಾಗಿ ದುಡಿಯಬೇಕು, ಕಳ್ಳ!

**ರೈತ:**—ಅಯ್ಯೋ! ದುಡಿವುದೇ? ರಾತ್ರಿ ಹಗಲೆನ್ನದೆ ನಾವು ಗಂಡಹೆಂಡಿರು, ಇಬ್ಬರು ದುಡಿಯುತ್ತೇವೆ. ಆದರೆ, ಮೂವರ ಹೊಟ್ಟೆ ಬಟ್ಟೆಗೇ ಗತಿಯಿಲ್ಲ. ನಮ್ಮ ಬೆವರಲ್ಲ, ರಕ್ತ, ರಕ್ತ ಸುರಿಯುತ್ತೇವೆ ಈ ಭೂಮಿಯ ಮೇಲೆ.

**೨. ಸೈನಿಕ:**—ಭೂದೇವಿ–ನಿನ್ನ ಮಾತಾಯಿ ನಿನ್ನಲ್ಲಿ ಮುನಿದಿದ್ದಾಳೆ.

**ರೈತ:**—ಹೌದು ಬುದ್ಧೀ! ಈ ವರ್ಷ ಮಳೆಯಿರಲಿಲ್ಲ; ಬೆಳೆ ಕಡಮೆ–ಬೆಳೆದುದು ಹೋಯಿತು ಸರಕಾರಕ್ಕೆ.

**೧. ಸೈನಿಕ:**—ಏ, ಮೂರ್ಖ! ಕಂದಾಯವನ್ನು ಕೊಡದಿದ್ದರೆ ಸರಕಾರವು ನಡೆವುದು ಹೇಗೋ?

**ರೈತ:**—ಸರಕಾರ! ಏನು ಸರಕಾರ, ಬುದ್ಧೀ! ನಮಗೇಕೆ ಸರಕಾರ? ನಮ್ಮ ಗೋಳನ್ನು ಕೇಳದ ಆ ಸರಕಾರವೇಕೆ ಸ್ವಾಮೀ?

**೧. ಸೈನಿಕ:**—ಹಾಗೇನ! ಇವೆಲ್ಲ ಆ ಶಿವಾಜಿಯ ಕಡೆಯ ಪುಂಡರ ಮಾತುಗಳಲ್ಲನೇ? ಕಂದಾಯ ಕೊಡಬೇಡಿ ಎಂದರೆ ಕಿವಿ ನೆಟ್ಟಗಾಗುತ್ತದೆ, ಅಲ್ಲವೆ?

**ರೈತ:**—ಮಹಾರಾಜರೆಲ್ಲಿ?—ನಮ್ಮ ನಾಯಕರೆಲ್ಲಿ?

**೨. ಸೈನಿಕ:**—ನಿನ್ನ ಮಹಾರಾಜ ಪುರಂದರಗಡದಲ್ಲಿ; ನಮ್ಮ ನಾಯಕರು ವಿಶಾಲಗಡದಲ್ಲಿ. ಅಲ್ಲವೇ? (ನಗುತ್ತಾನೆ.)

**ರೈತ:**—ಮಹಾರಾಜರಿಗೆ ಬಡವರಲ್ಲಿ ಬಹಳ ದಯೆ ಸ್ವಾಮೀ! ಈ ವರ್ಷ ಬರಗಾಲವೆಂದು ಅನೇಕ ಹಳ್ಳಿಗಳಲ್ಲಿ ಕಂದಾಯ ಮಾಫಿ ಮಾಡಿದ್ದಾರೆ.

**೧. ಸೈನಿಕ:**—ಅವನೆಲ್ಲಿಯಾದರೂ ದರೋಡೆಮಾಡಿ ಬೊಕ್ಕಸ ತುಂಬಿಸಿಕೊಳ್ಳುವನು. ನಮ್ಮ ನಾಯಕರಿಂದ ಅದಾಗದು. . . .

**೨. ಸೈನಿಕ:**—ತಮ್ಮ ಪಾಲಿನ ಕಂದಾಯವನ್ನು ಕೊಟ್ಟೇ ತೀರಬೇಕು ಎನ್ನುತ್ತಾರೆ.

**೧. ಸೈನಿಕ:**—ಮತ್ತೆ? ನ್ಯಾಯವಲ್ಲವೇ ಅದು?

**ರೈತ:**—ಇದೇನು ಸ್ವಾಮೀ? ಇದು ದರೋಡೆ ಅಲ್ಲವೆ?—ಸರಕಾರ—ಬೊಕ್ಕಸ—ನಾವು ಬೊಕ್ಕಸವನ್ನು ತುಂಬಲಿಕ್ಕಿರುವ ಜನರು!

**೧. ಸೈನಿಕ:**—(ಹೊಡೆದು) ಯಾರಲ್ಲಿ ಮಾತಾಡುತ್ತೀಯೆಂದು ಗೊತ್ತಿದೆಯೋ? ಮಂಗ!

**೨. ಸೈನಿಕ.**—ನಾವು ಸರಕಾರದ ಕಡೆಯವರಲ್ಲವೇ?

**ರೈತ:**—ಏನು ಬುದ್ಧೀ? ಸರಕಾರದವರಾದರೆ ಹೊಡೆಯಬೇಕೇ?

೧. **ಸೈನಿಕ:**—ತಲೆ ತುಂಬ ಮಾತನಾಡಿದುದಕ್ಕೆ ಹೊಡೆದುದು. ಇದು ನಿನ್ನ ಪಾಲಿನ ಕಂದಾಯವನ್ನು!

**ರೈತ:**—ಮೊನ್ನೆ ತೆಗೆದುಕೊಂಡು ಹೋದರು, ಬುದ್ಧೀ!

೨. **ಸೈನಿಕ:**—ಯಾರೋ ತೆಗೆದುಕೊಂಡು ಹೋದುದು? ಸುಳ್ಳು ಹೇಳುತ್ತೀಯಾ, ಕಳ್ಳ!

೧. **ಸೈನಿಕ:**—ಚರ್ಚೆಯಿಲ್ಲದೆ ಕೊಟ್ಟರೆ ಸರಿ. ಇಲ್ಲವಾದರೆ ನಿನ್ನ ಮನೆಯಲ್ಲಿದ್ದುದೆಲ್ಲ ಹೋಯಿತೆಂದು ತಿಳಿ.

**ರೈತ:**—ಮೊನ್ನೆಯೂ ಹೀಗೆಯೇ ಗದರಿಸಿದರು; ಇದ್ದುದನ್ನೆಲ್ಲ ದೋಚಿ ಕೊಂಡು ಹೋದರು. ಅಯ್ಯೋ! (ಅಳುತ್ತಾನೆ.)

೧. **ಸೈನಿಕ:**—ಎಷ್ಟು ಬೇಗ ಕಣ್ಣೀರು ಬರುತ್ತದೆ? ನೆತ್ತಿಯಲ್ಲಿ ಕಣ್ಣೀರ ಬುಗ್ಗೆಯಿದೆಯೋ ಏನೋ?

೨. **ಸೈನಿಕ:**—ಹಾ! ಅದೀಗ; ತಲೆಯನ್ನು ತಗ್ಗಿಸಿ ಎರಡೂ ಕೈಗಳಿಂದ ಅದನ್ನು ಒತ್ತಿದ ಕೂಡಲೆ ನೀರು ಇಳಿವುದು ಕಣ್ಣಿಂದ!

**ರೈತ:**—ನಮ್ಮ ಸಂಕಟ, ನಮ್ಮ ಗೋಳು, ನಿಮಗೆ ಹೇಗೆ ಗೊತ್ತು?

೧. **ಸೈನಿಕ:**—ನಿಮ್ಮ ಉಪಾಯವೆಲ್ಲ ಗೊತ್ತು ನಮಗೆ! ಏನು? ಮನೆಯನ್ನು ಹೊಗುವುದೋ? ನೀನಾಗಿಯೇ ತರುವೆಯೋ?

**ರೈತ:**—ಮನೆಯೇ? ಮನೆಯಲ್ಲೇನಿದೆ?–ಅಯ್ಯೋ! ಮನೆಯಲ್ಲಿರುವುದು ನಾಲ್ಕು ಮಡಕೆಗಳು.

೨. **ಸೈನಿಕ:**—ಏ! ನಿನ್ನ ಒಣಹರಟೆ ಬೇಡ.

**ರೈತ:**—ಹೋಗಲಿ, ಬುದ್ಧೀ! ನನ್ನ ಮಡಕೆಗಳು ಹೋಗಲಿ?- ಮನೆಯನ್ನು ಹೊಗುವುದು–ಅದರಲ್ಲೇನಿದೆಯೆಂದೋ?

೧. **ಸೈನಿಕ:**—ಇವನ ಹರಟೆಯನ್ನು ನೋಡಬಾರದೆ? (ಎಂದು ಒದೆವನು.)

(೨ನೆಯವನು ಮನೆಯನ್ನು ಹುಡುಕಿ ಒಂದು ಸೀರೆಯನ್ನೂ, ಒಂದು ತಾಮ್ರದ ಕೊಡವನ್ನೂ ತರುವನು.)

೧. **ಸೈನಿಕ:**—ಹಾ! ಇಲ್ಲಿ ಕೊಡು; ಆ ಸೀರೆಯನ್ನು. (ಅದನ್ನು ಬಿಡಿಸಿ ನೋಡುತ್ತಾ) ಇದೇನೋ? ಹೊಸ ಸೀರೆ ತೆಗೆದುಕೊಳ್ಳಲಿಕ್ಕೆ ಹಣವಿದೆ ನಿನಗೆ?

**ರೈತ:**—(ಅಳುತ್ತಾ) ಅದು, ಆಕೆಗೆ ಅವಳ ತಾಯಿ ಕೊಟ್ಟದ್ದು, ಒಡೆಯ! ಹೆಂಗುಸರ ಸೀರೆ! ಅದು ಸರಕಾರಕ್ಕೆ ಬೇಕೇ?

**೧. ಸೈನಿಕ:**—ಎಲೋ! ಇದನ್ನು ಕೊಳ್ಳುವವರಿಲ್ಲವೆಂದೊ ನಿನ್ನ ಧೈರ್ಯ! ಹೇ! ತಕ್ಕ! ಹಣವನ್ನೆಲ್ಲಿಯೋ ಹುಗಿದಿಟ್ಟಿದ್ದೀಯಲ್ಲವೇ?

(ರೈತನ ಹೆಂಡತಿ ಗುಡಿಸಿಲಿಂದ ಹೊರಗೆ ಬಂದು)

**ರೈ. ಹೆ:**—ಸ್ವಾಮಿ! ಅದು ನನ್ನ ಸೀರೆ; ಅದನ್ನು ಕೊಡಿ ಬುದ್ಧೀ! ಅದನ್ನು ಇವರು ಕೊಂಡು ಕೊಟ್ಟದ್ದಲ್ಲ.—ಒಂದಿಷ್ಟೂ ಕರುಣೆಯಿಲ್ಲವೆ ನಿಮಗೆ!

**೧. ಸೈನಿಕ:**—ಹೇ! ಎಲಾ! ಬಹಳ ಧಿಮಾಕಿನವಳು ಇವಳು? ಏನೇ? ನಮಗೆ ಬುದ್ಧಿ ಹೇಳಲಿಕ್ಕೆ ಬಂದೆಯಾ?

**ರೈತ:**—ಎಲೇ? ಹಾಗೆ ಮಾತನಾಡ ಬೇಡೆಲೇ? ಅವರು ಸರಕಾರದವರು. ಅವರನ್ನು ಬೇಡಿಕೋ?

**ರೈ. ಹೆ:**—ಸರಕಾರದವರೇ! ಅಯ್ಯಮ್ಮಾ!

**೨. ಸೈನಿಕ:**—ಹಾ! ಅಂಜಬೇಡ. ತಿಳಿಯದೆ ಮಾತನಾಡಿದೆ; ತಪ್ಪೇನು?

**೧. ಸೈನಿಕ:**—ಹಾಗೆ ಮಾತನಾಡಿದೆಯೆಂದು ನಾವು ಸಿಟ್ಟಾಗುವುದಿಲ್ಲ. ಹೆದರಬೇಡ.

**ರೈ. ಹೆ:**—ಸ್ವಾಮಿ! ದಮ್ಮಯ್ಯ- ನನಗಿರುವುದು ಒಂದೇ ಸೀರೆ. ಅದನ್ನು ನನಗೆ ದಯೆಮಾಡಿ ಕೊಡಿ (ಎಂದು ಎರಡೂ ಕೈಗಳನ್ನು ಚಾಚುವಳು.)

**೧. ಸೈನಿಕ:**—(ನಗುತ್ತಾ) ಏ! ನನ್ನ ಜತೆಯಲ್ಲಿ ಬಾ. ನಾನು ಒಂದಲ್ಲ ಹತ್ತು ಸೀರೆಗಳನ್ನು ಕೊಡುತ್ತೇನೆ.

**೨. ಸೈನಿಕ:**—ಹೇಗೆ? ಎಷ್ಟು ಉದಾರ ಬುದ್ಧಿ?

**ರೈ. ಹೆ:**—ನನ್ನ ಸೀರೆ ನನಗೆ ಬುದ್ಧೀ! ನಿಮ್ಮ ಸೀರೆ ನನಗೇಕೆ?

**೨. ಸೈನಿಕ:**—ಹಾ! ಏ! ನೀನು ಸೀರೆಯುಡುತ್ತೀಯೋ? ಎಷ್ಟು ಚೆಂದ ಏಟು ಕೊಟ್ಟಳು ನಿನಗೆ?

ರೈತ:—ಹಾಗಲ್ಲ ಬುದ್ಧೀ!

೧. ಸೈನಿಕ:—ಹಾಗಲ್ಲ. ಹೀಗೆ (ಎಂದು ಹೊಡೆವನು. ಅವಳು ತಡೆವಳು.) ಏನೇ? ನಾನು ಕೊಡುವ ಸೀರೆ ಬೇಡವೆ ನಿನಗೆ?

ರೈ. ಹೆ:—ದಮ್ಮಯ್ಯ! ಅವರಿಗೆ ಹೊಡೆಯಬೇಡಿ.

೨. ಸೈನಿಕ:—ನಿಮ್ಮ ಮೇಲೆ ಕಂದಾಯ ಬಾಕಿಯಾಗಿದೆ. ಬೇಗ ಕೊಟ್ಟುಬಿಡು ಅದನ್ನು.

ರೈ. ಹೆ:—ಅಯ್ಯೋ! ಈ ವರ್ಷ ಬೆಳೆದುದನ್ನು ಕೊಟ್ಟೂ, ಇನ್ನೂ ಕಂದಾಯ ಬಾಕಿಯೇ?

೧. ಸೈನಿಕ:—ಏ! ನಿನ್ನ ಒಯ್ಯಾರ ಬೇಡ! ಕೊಡುತ್ತೀಯೋ? ಅಲ್ಲ, ನಿನ್ನನ್ನೆಳೆದುಕೊಂಡು ಹೋಗಬೇಕೋ?

ರೈ. ಹೆ:—ನಮ್ಮಲ್ಲೇನಿದೆ ಬುದ್ಧೀ? ಇಂದು ಇನ್ನೂ ಗಂಜಿ ಕುಡಿಯ ಲಿಲ್ಲ.

೧. ಸೈನಿಕ:—(ನಕ್ಕು) ಗಂಜಿಯೇ!–ಪಾಪ! ನನ್ನೊಡನೆ ಬಾ; ಗಂಜಿ ಯಲ್ಲ, ಅನ್ನ ಕೊಡುತ್ತೇನೆ. ಒಳ್ಳೆಯ ಸೀರೆ ಕೊಡುತ್ತೇನೆ.

೨. ಸೈನಿಕ:—ಓಹೋ! ಧರ್ಮರಾಯ!–ಏ, ಏನಿದು?

೧. ಸೈನಿಕ:—ಸುಮ್ಮನಿರು.—ಪಾಪ! ಈ ಭಿಕಾರಿಯ ಕೈಹಿಡಿದುದಕ್ಕೆ ಅವಳ ಗತಿ!

ರೈ. ಹೆ:—ಅವರನ್ನೇಕೆ ದೂರಲಿ ನಾನು? ನನ್ನ ಹಣೆಯ ಬರೆಹ.

೧. ಸೈನಿಕ:—ಹಾ! ಅದನ್ನ ನಾನು ತಿದ್ದಿ ಬರೆಯುತ್ತೇನೆ. ಹೀಗೆ ಬಾ! (ಎಂದು ಕೈಹಿಡಿಯಲಿಕ್ಕೆ ಹೋಗುವನು.)

ರೈ. ಹೆ:—(ಕೈ ಕೊಡಹಿ)—ಏನು? ಹೆಂಗುಸರ ಮೇಲೆ ಕೈಮಾಡುತ್ತೀರಾ?

೨. ಸೈನಿಕ:—(ನಕ್ಕು) ಅದೀಗ. ಸರಿಯಾಯಿತು ನಿನಗೆ, ಮಂಗಳಾ ರತಿ.

ರೈ. ಹೆ:—ಬಡವರೆಂದು ನಮ್ಮನ್ನು ಪೀಡಿಸುವುದಲ್ಲವೇ?

೧. ಸೈನಿಕ:—ಕೊಟ್ಟುಬಿಡಬಾರದೆ ಬಾಕಿಯಾದ ಕಂದಾಯವನ್ನು? ಹೇಗಾದರೂ ಅದನ್ನು ಸಂಗ್ರಹಿಸುವುದು ನನ್ನ ಕೆಲಸ. ಹೂಂ– ಬೇಗ!

**ರೈತ:**—(ಸಿಟ್ಟುಗೊಂಡು)—ನಮ್ಮಲ್ಲೇನೂ ಇಲ್ಲ; ಆಯಿತಲ್ಲ. ನಿಮ್ಮ ತೆರಿಗೆ!

**೧. ಸೈನಿಕ:**—(ಹೊಡೆದು) ನೀನಲ್ಲಿ ಬಿದ್ದಿರು. ಪುಂಡ!

**ರೈ. ಹೆ:**—ಅಯ್ಯೋ! ಅವರನ್ನು ಹೊಡೆಯಬೇಡಿ, ಸ್ವಾಮಿ?

**೧. ಸೈನಿಕ:**—ಹೂಂ!—ಏನೇ? ನಾಳೆ ಬರುವೆನು. ಎಲ್ಲಿಂದಾದರೂ ಹಣವನ್ನು ಕೊಡಿಡು.

**ರೈ. ಹೆ:**—ಎಲ್ಲಿಂದ? ನಾನೆಲ್ಲಿಂದ ಹಣವನ್ನು ತರಲಿ? ನಮಗೆ ಸಾಲ ಕೊಡುವವರು ಯಾರು, ಬುದ್ಧೀ?

**೧. ಸೈನಿಕ:**—ಏನೇ? ನಿನಗೂ ಹಣ ಸಿಕ್ಕುವುದಿಲ್ಲವೇ? ಕಲಿಕಾಲ!

**೨. ಸೈನಿಕ:**—ಸ್ವಲ್ಪ 'ಹುಶಾರ್'! ನಮ್ಮಣ್ಣನೆ ನಿನಗೆ ಕೊಡುವುದಿಲ್ಲವೇ?

**ರೈ. ಹೆ:**—ನನ್ನ ಸೀರೆಯನ್ನು ಹಿಂದೆ ಕೊಡದವರು, ಹಣವನ್ನು ಸಾಲ ಕೊಡುತ್ತಾರೆ!

**೧. ಸೈನಿಕ:**—(ನಕ್ಕು) ಸಾಲವಲ್ಲ; ನಿನಗೆ ಇನಾಮು.

**ರೈ. ಹೆ:**—(ಮುಖಕ್ಕೆ ಉಗುಳಿ) ಛೀ! ನೀವು ಯಮನ ಕಡೆಯವರು.

**೨. ಸೈನಿಕ:**—ಏ! ಛೀ! ಥೂ!—ನಿನ್ನ ಜತೆಯಲ್ಲಿದ್ದುದಕ್ಕೆ ನನಗೂ ಅಪಮಾನ.

**೧. ಸೈನಿಕ:**—ಅಬ್ಬ! ನಿನ್ನ ಡಂಬವೇ (ಎಂದು ಅವಳ ಕೈಹಿಡಿದು ಎಳೆವನು. ಅವಳು ಅಡಗಿಸಿಟ್ಟುಕೊಂಡಿದ್ದ ಕಂಚಿನ ಬಟ್ಟಲು ಕೆಳಗೆ ಬೀಳುವುದು.)

**ರೈ. ಹೆ:**—ಅಯ್ಯೋ! ನನ್ನ ಮಗುವಿನ ಬಟ್ಟಲು! ನನ್ನ ಸೀರೆಯನ್ನು ಕೊಂಡುಹೋಗಿ! (ಅದನ್ನು ಹೆಕ್ಕುತ್ತಾಳೆ.) ಆದರೆ, ಈ ಬಟ್ಟಲು, (ಅಳುತ್ತಾಳೆ) ನನ್ನ ಮಗುವಿನದು . . . .

**೧. ಸೈನಿಕ:**—(ಅದನ್ನು ಎಳೆದುಕೊಳ್ಳಲು ಹೋಗುವಾಗ ಎರಡನೆಯವನು ತಡೆದು)

**೨. ಸೈನಿಕ:**—ಹೆಂಗುಸನ್ನೂ ಹೊಡೆಯುತ್ತೀಯಾ? ನೀನು ಯಮನ ಕಡೆಯವನೇ?

**೧. ಸೈನಿಕ:**—ಓಹೋ! ಬಹಳ ಬುದ್ಧಿವಂತ! ಅವಳನ್ನು ಹೀಗೆ ಒಲಿಸಿಕೊಳ್ಳುವ ನೋಟವಲ್ಲವೇ?

**ರೈ. ಹೆ:**—(ಎರಡನೆಯವನ ಕಾಲಬುಡದಲ್ಲಿ ಬಿದ್ದು) ದೇವರೂ! ಈ ಬಟ್ಟಲನ್ನು ನನಗೆ ದಾನಮಾಡಿರಿ. ನನ್ನ ಮಗು ಈ ಬಟ್ಟಲಿನಲ್ಲಲ್ಲದೆ ಉಣ್ಣುವುದಿಲ್ಲ. ಇದು ನನ್ನ ಮಗುವಿನದು.

**೨. ಸೈನಿಕ:**—ಇರಲಿ, ನಿನ್ನಲ್ಲಿರಲಿ!–ಹೇ! ಬಾರೋ! ಇವರನ್ನು ಕಾಡಿ ಪ್ರಯೋಜನವಿಲ್ಲ.

**೧. ಸೈನಿಕ**—ಆಹಾ! ಮಗು ಉಣ್ಣುತ್ತದಲ್ಲವೇ? ಈಗ ಹೇಳಿದಳಲ್ಲವೇ ಅವಳು, ನಾವು ಗಂಜಿ ಕುಡಿಯಲಿಲ್ಲವೆಂದು? ಹಳ್ಳಿಯವರು ಹೇಳುವುದೇ ಸುಳ್ಳು.

**ರೈ. ಹೆ:**—ಸುಳ್ಳೇ! ಏ ದೇವಾ! ನಾವೂ ಸುಳ್ಳು ಹೇಳುವುದೇ? ಏಕಪ್ಪಾ?

**೨. ಸೈನಿಕ:**—ಅವರು ಉಪವಾಸವಿದ್ದರೂ ಮಗುವನ್ನು ಉಣ್ಣಿಸುವುದಿಲ್ಲವೇ? ಮನೆಯಲ್ಲಿ ಏನಿದೆ? ಎಷ್ಟು ಪೀಡಿಸುವುದು ಅವರನ್ನು?

**೧. ಸೈನಿಕ:**—ಹಣವಿಲ್ಲ, ಹೋಗಲಿ!—ಆದರೆ, ಅವಳು.

**೨. ಸೈನಿಕ:**—ಏನೋ ಹುಚ್ಚು! ನೀನು ಹೀಗೆ ಹೆದರಿಸಿ ಗದರಿಸಿದರೆ ಅವಳು ಒಲಿಯುತ್ತಾಳೋ?

**೧. ಸೈನಿಕ**—ಅದು ನಿಜ, ನಿಜ!—ಮತ್ತೇನು ಮಾಡುವುದು?

**೨. ಸೈನಿಕ:**—ಇಂದೋ ನಾಳೆಯೋ ಬಿಡುವಿದ್ದಾಗ ಬಂದು ನೋಡುವುದು.

**೧. ಸೈನಿಕ:**—ಹೌದು, ಹಾಗೆಯೋ—ಏ, ಹೆಣ್ಣೆ! ನಾಳೆ ಬರುತ್ತೇನೆ ನಾನು; ಹಣವನ್ನು ಕೂಡಿಡು; ಜೋಕೆ. (ಎಂದು ಓರೆಗಣ್ಣಿಂದ ನೋಡುತ್ತಾ ಹೋಗುವನು. ೨ನೆಯವನು ಅವನನ್ನು ಅನುಸರಿಸುವನು.)

**ರೈ:**—ಅಯ್ಯೋ! ಇಲ್ಲಿಗೆ ಹೊಡೆದ ಏಟು ಬಲವಾಗಿದೆ.

**ರೈ. ಹೆ:**—(ಅವನ ಮೋಲಿನ ಮಣ್ಣನ್ನೂ ಗಾಯದಿಂದ ಇಳಿವ ರಕ್ತವನ್ನೂ ತನ್ನ ಬಟ್ಟೆಯ ಸೆರಗಿನಿಂದ ಒರಸಿ) ಅಯ್ಯೋ, ದೇವರೆ! ನಮ್ಮ ನಾಡಲ್ಲಿಯೆ ನಮಗೆ ಈ ದುರ್ಗತಿಯೇ?

**ರೈ:**—(ಸಿಟ್ಟುಗೊಂಡು, ಎದ್ದು ನಿಂತು) ಇರಲಿ, ಈಗಲೆ ಹೊರಟೆ! ಎಲ್ಲ ಹೇಳುತ್ತೇನೆ.

**ರೈ. ಹೆ:**—ಎಲ್ಲಿಗೆ? ಹೇಳುವುದಾದರೂ ಯಾರ ಹತ್ತಿರ?

**ರೈ:**—ಈ ಗಾಯವನ್ನೂ ತೋರಿಸುತ್ತೇನೆ. ನಿನ್ನ ಕೈಹಿಡಿದುದನ್ನೂ ಹೇಳುತ್ತೇನೆ.

**ರೈ. ಹೆ:**—ನೀವೇಕೆ ಹೀಗೆ? ಯಾರಲ್ಲಿ ಹೇಳುವುದು?

**ರೈ:**—ಯಾರಲ್ಲಿಯೇ?—ತುಂಟರು ಇವರು. ನಮ್ಮನ್ನು ಕೇಳುವವರಿಲ್ಲವೆಂದೇ ಈ ಸಾಹಸ?

**ರೈ. ಹೆ:**—(ಅವನ ಕೈಹಿಡಿದು ಅಲುಗಾಡಿಸಿ) ಯಾರ ಹತ್ತಿರ? ಹೇಳುವುದೇನೆಂದು?

**ರೈ:**—ನಾಯಕರಲ್ಲಿ ಹೇಳುವುದು; ಇವರು ಮಾಡಿದ ಅನ್ಯಾಯವನ್ನು. ಇವರಿಗೆ ತಕ್ಕ ಶಿಕ್ಷೆಯಾಗಬೇಕು.

**ರೈ. ಹೆ:**–ಅಯ್ಯೋ! ನಾಯಕರ ಹೇಳಿಕೆಯಂತೆಯೇ ಇವರು ನಮ್ಮನ್ನು ಪೀಡಿಸುವುದಲ್ಲವೇ?

**ರೈ:**—ಇಷ್ಟೆಯೋ ನಿನಗೆ ಗೊತ್ತು! ನೋಡು ಏನಾಗುತ್ತದೆಂದು? ನಾನು ಹೀಗೆಯೇ ಹೋಗಿ ಹೇಳಿದರೆ . . .

**ರೈ. ಹೆ:**—ನಿಮಗೆ ಸೆರೆಮನೆ . . . ಅಯ್ಯೋ, ಜೀವ! ಮೊನ್ನೆ ಅಲ್ಲಿಗೆ ದೂರಿಡಲಿಕ್ಕೆ ಹೋದ ರೈತರ ಗತಿ ಕೇಳಲಿಲ್ಲವೇ? ಅವರನ್ನು ಬಿಸಿಲಲ್ಲಿ ನಿಲ್ಲಿಸಿ ಚಡಿ ಹೊಡೆಸಿದರಂತೆ ನಾಯಕರು.

**ರೈ:**—ಅವರು ಜಗಳಮಾಡಿದರೆಂದು! ನಾನು ಹಾಗೆ ಮಾಡಿಲ್ಲ.

**ರೈ. ಹೆ:**—ಅಲ್ಲಪ್ಪಾ, ಕಂದಾಯ ಕೊಡಲಿಲ್ಲವೆಂದೆ ನಾಯಕರಿಗೆ ಸಿಟ್ಟು ಬಂದುದಂತೆ!

**ರೈ:**—ನಮ್ಮ ದೊರೆಯೂ ದೂರು ಕೇಳದಿದ್ದರೆ ನಮ್ಮ ಗತಿ?

**ರೈ. ಹೆ:**—ನಾನು ಮೊನ್ನೆಯೇ ಹೇಳಿದ್ದೆನು. ಪುರಂದರಗಡಕ್ಕೆ ಹೋಗುವ, ಇಲ್ಲಿಂದ ಪಾರಾಗುವ, ಎಂದು.

**ರೈ:**—ಇನ್ನು ಹೋಗುವುದೆ, ಮತ್ತೇನು?

**ರೈ. ಹೆ:**—ಮೊದಲೆ ಹೋಗುತ್ತಿದ್ದರೆ ಈ ಅಪಮಾನ,–ಅಯ್ಯೋ, ಈ ಪೆಟ್ಟು ತಪ್ಪುತ್ತಿತ್ತು.

**ರೈ:**—ನನ್ನ ಹುಟ್ಟೂರು! ಬಿಡಬೇಕಲ್ಲಾ ಎನಿಸಿತು. ಅಲ್ಲಿಗೆ ಹೋದರೆ ಇನ್ನೇನೋ? (ಅಳುವನು.)

**ರೈ. ಹೆ:**—ಇಲ್ಲ, ಎಂದರೆ! ಎಷ್ಟು ಜನ ಈ ಮೊದಲೆ ಹೋದವರು; ಅವರೆಷ್ಟು ಸುಖದಲ್ಲಿದ್ದಾರೆ!

**ರೈ:**—ಹೂಂ! ಅಲ್ಲಿ ಹೋದರೆಃ-ನಮಗೆ ಉಣ್ಣಲಿಕ್ಕೆ ದಾರಿ?

**ರೈ. ಹೆ:**—ಅಲ್ಲಿ ಹೊಲಗಳನ್ನು ಕೊಡುತ್ತಾರೆ. ಹೊಲದ ಬಳಿಯಲ್ಲಿಯೇ ನಮಗಿರಲು ಗುಡಿಸಿಲು.

**ರೈ:**—ಹೊಲವೇಕಪ್ಪಾ, ನಮಗೆ? ಇನ್ನು ನಾನು ಬೇಸಾಯಮಾಡುವುದುಂಟೇ?

**ರೈ. ಹೆ:** — ಅದೇಕೋ ಈ ವೈರಾಗ್ಯ?

**ರೈ:** —ಅಯ್ಯೋ! ನಮಗೆ ಎತ್ತು, ಬಿತ್ತು, ಸಾಮಗ್ರಿಗಳನ್ನು ಕೊಡುವವರು ಯಾರೆ? ಇದ್ದುವೆಲ್ಲ ಹೋದುವು ಈ ಪಾಪಿಯ ಕೈಗೆ.

**ರೈ. ಹೆ:**—ಎಲ್ಲಾ ಕೊಡುತ್ತಾರೆ ಅಲ್ಲಿ. ಹೊಸತಾಗಿ ಹೋದವರ ಹೊಲಗಳನ್ನು ನೆರೆಹೊರೆಯವರೆ ಉತ್ತುಕೊಡುತ್ತಾರೆ; ಬಿತ್ತಲಿಕ್ಕೆ ಬೇಕಾದ ಬೀಜವನ್ನು ಕೊಡುತ್ತಾರೆ. ಕೊಯ್ಯುವ ವರೆಗೆ ಉಣ್ಣಲಿಕ್ಕೆ ಕೊಡುತ್ತಾರೆ. ಅಷ್ಟರ ವರೆಗೆ ಕಾಡುಕಡಿವ ಕೆಲಸವನ್ನು ಮಾಡಿದರೆ ಸರಿ.

**ರೈ:**—ಅವರ ಕಂದಾಯ? ಅದನ್ನೆಲ್ಲಿಂದ ಕೊಡಲಿ?

**ರೈ. ಹೆ:** — ಮಹಾರಾಜರು ಬಹಳ ದಯಾಳುವಲ್ಲವೇ? ನಮ್ಮ ಸ್ಥಿತಿ ಸುಧಾರಿಸದೆ ನಮ್ಮಿಂದ ಕರವೆತ್ತುವುದಿಲ್ಲ.

**ರೈ:**—ಆಗಲಿ; ಈ ಪೀಡೆ ಬೇಡ! ಎಂತಹ ಕೆಲಸವೂ ಆದೀತು; ಈ ಗೋಳು ಬೇಡಪ್ಪಾ!

**ರೈ. ಹೆ:**—ಸರಿ, ಹಾಗಾದರೆ ಇಂದೆ ಹೋಗುವುದು.

**ರೈ:**—ಓಹೋ! ಹೀಗೆಯೇ ಹೊರಡುವುದು; ಮತ್ತೇನು? ದಾರಿಯಲ್ಲಿ ಬೇಡಿಕೊಂಡು ಹೋಗಬಹುದು. ಹಾಳಾಗಲಿ ಈ ಖಂಡೋಜಿ! (ನಕ್ಕು, ದುಃಖದಿಂದ)—ಬಾ, ಬಾ! ನಾಳೆ ನಿನ್ನ ಕಂದಾಯವು ಸಿಕ್ಕುವುದು ಈ ಮನೆಯಲ್ಲಿ! (ಗುಡಿಸಿಲಿನ ಒಳಗೆ ಹೋಗುವರು.)

## ದೃಶ್ಯ ೨

ಪುರಂದರ ಗಡ: ಸುಗುಣನಾಯಕನ ಕೋಣೆ.
ನೇತಾಜಿಯೂ ಸುಗುಣನಾಯಕನೂ ಕುಳಿತಿದ್ದಾರೆ.

**ನೇ:**—ಭಾವಾ! ನನ್ನ ಬುದ್ಧಿಯೇ ಹರಿವುದಿಲ್ಲ. ಖಂಡೋಜಿಯ ಕಾರ್ಯದ ಮರ್ಮವನ್ನೇ ತಿಳಿವುದು ಅಸಾಧ್ಯವಾಯಿತು.

**ಸು:**—ಅವನು ದುಷ್ಟನು. ಇಲ್ಲವಾದರೆ ಹಳ್ಳಿಯವರನ್ನೇಕೆ ಪೀಡಿಸಬೇಕು?

**ನೇ:**—ಈ ದುಷ್ಕರ್ಮದ ಫಲವು ಬಹುಬೇಗನೆ ಅವನಿಗೂ ತಿಳಿವುದು. ಪ್ರಜೆಗಳನೇಕರು ಮಹಾರಾಜರ ಆಶ್ರಯವನ್ನು ಸೇರಿದರು. ಇನ್ನುಳಿದವರು ಸಮಯನಿರೀಕ್ಷಣೆಯಲ್ಲಿದ್ದಾರೆ.

**ಸು:**—ಜನರನ್ನು ಹೆದರಿಸಿ, ಪೀಡಿಸಿ ಅಂಕೆಯಲ್ಲಿಟ್ಟುಕೊಳ್ಳುತ್ತೇನೆಂಬ ಅವನ ಭಾವನೆಯೇ ವಿಚಿತ್ರವಾದುದು.

**ನೇ:**—ದುಷ್ಟರೂ ಸ್ವಾರ್ಥಪರರೂ ಅಧಿಕಾರಿಗಳಾದರೆ ಹೀಗೆಯೇ!—ತಾರೆಯ ವರ್ತಮಾನವೇ ಇಲ್ಲ. ಅವಳನ್ನು ಯಾವ ಸಂಕಷ್ಟದಲ್ಲಿಳಿಸಿದ್ದಾನೋ? ಈ ವಿಷಯವೇ ನನ್ನ ಮನಸ್ಸನ್ನು ಕೊರೆಯುತ್ತಿದೆ.

**ಸು:**—ಮಾರೋಜಿಗೇನೂ ತಿಳಿದಿಲ್ಲವೆ ತಾರೆಯ ವಿಷಯ?

**ನೇ:**—ಯಾತ್ರೆಗೆಂದು ಹೊರಟವರು ಅರಣ್ಯವನ್ನು ಸೇರಿದ್ದಾರೆಂದು ಅವನಿಗೆ ತಿಳಿದಿದೆ. ಆದರೆ, ನಮ್ಮ ಗುಪ್ತಚರರ ಹೇಳಿಕೆಯಂತೆ ಅವರು ಅರಣ್ಯದಿಂದ ಬೇರಾವ ಕಡೆಗೂ ಹೋದಂತೆ ತೋರುವುದಿಲ್ಲ.

**ಸು:**—ಹಾಗಾದರೆ, ಅವಳನ್ನು ಅರಣ್ಯದಲ್ಲಿಯೇ ಅಡಗಿಸಿಟ್ಟಿರಬೇಕು.

**ನೇ:**—ಅದರ ಉದ್ದೇಶ?

**ಸು:**—ಅವಳನ್ನು ದೂರವಿರಿಸಿ ತನ್ನಿಚ್ಛೆಯಂತೆ ವರ್ತಿಸುವುದು. ಬಹುಶಃ ರಾಜ್ಯದಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸುವುದು.

**ನೇ:**—ಛೇ! ಅವಳು ಎಂದೂ ಇದಕ್ಕೆ ಸಮ್ಮತಿಸಲಿಕ್ಕಿಲ್ಲ.

**ಸು:** ಅವಳೇ ಬಂಧನದಲ್ಲಿದ್ದರೆ?

**ನೇ:**—(ಆಲೋಚಿಸಿ)-ಭಾವಾ! ಇದೂ ಅಸಂಭವ. ಸೈನಿಕರಿಗೆ ಅವಳ ಮೇಲಿರುವ ಅಭಿಮಾನವೇನು!—ಅವಳನ್ನು ಬಂಧಿಸಿದರೆ ಸೈನಿಕರು ಅವನನ್ನೆ ಇದಿರಿಸಬಹುದು.

**ಸು:**—ಸೈನಿಕರಿಗೆ ತಿಳಿಯದಂತೆಯೇ ಅವಳನ್ನು ಇಟ್ಟಿದ್ದರೆ?

**ನೇ:**—(ಆಲೋಚಿಸಿ)-ಹೂಂ! ಆದುದರಿಂದ ಅವಳ ಶೋಧನೆಯನ್ನು ಮಾಡಬೇಕಾಯಿತು.

**ಸು:**—ಇನ್ನೂ ನಿನ್ನ ಹುಚ್ಚು! ಅವಳಿಗೆ ನಿನ್ನಲ್ಲಿ ವಿಶ್ವಾಸವಿಲ್ಲ. ಆದರೂ ನಿನಗೆ ಅವಳ ಚಿಂತೆ.

**ನೇ:**—ನೀವು ಹಾಗೆನ್ನಬಾರದು, ಭಾವಾ! ಅವಳು ಖಂಡೋಜಿಯೊಡ್ಡಿದ ಬಲೆಯಲ್ಲಿ ಬಿದ್ದಿರಬಹುದು.

**ಸು:**—ನೇತಾ! ಆ ಹುಡುಗಿಗೋಸ್ಕರ ನೀನು ಅಪಾಯಕ್ಕೊಳಗಾಗುವುದೇ?

**ನೇ:**—ನನ್ನ ಕರ್ತವ್ಯವನ್ನು ಮರೆಯಬೇಕೆಂದೇ ನಿಮ್ಮ ಸೂಚನೆ.

**ಸು:**—(ಆಲೋಚಿಸಿ) (ಆತ್ಮಗತ)-ಹುಡುಗಿಯ ಹುಚ್ಚು. ತಾರುಣ್ಯದಲ್ಲಿ ಹೀಗೆಯೇ?

(ಪ್ರಕಾಶ) ನೇತಾ! ಆಗಲಿ; ಗುಪ್ತಚರರನ್ನು ಅರಣ್ಯಕ್ಕೆ ಕಳುಹಿಸುವ; ಅವರು ಶೋಧನೆಯನ್ನು ಮಾಡಲಿ.

**ನೇ:**—ಏಕೆ? ನಾನೇ ಈ ಕೆಲಸದಲ್ಲಿ ಮುಂದಾದರೇನು?

**ಸು:**—ಅಪಾಯವಿದೆ. ಹೋಗಬೇಡ. ಖಂಡೋಜಿ ನಿನ್ನ ವಿನಾಶವನ್ನೆ ಬಯಸುತ್ತಾನೆಂದು ಬಲ್ಲೆಯಷ್ಟೆ!

**ನೇ:**—ಅಪಾಯವಿದೆಯೆಂದು ಕರ್ತವ್ಯಪರಾಙ್ಮುಖನಾಗುವುದೇ?

**ಸು:**—(ಸಿಟ್ಟಿನಿಂದ)—ನಿನ್ನ ಸುಟ್ಟ ಕರ್ತವ್ಯ!

**ನೇ:**—ಭಾವಾ, ಕ್ಷಮಿಸಿರಿ! ಸಂಕಷ್ಟಕ್ಕೊಳಗಾದ ಆರ್ತರನ್ನು ರಕ್ಷಿಸುವುದು ನಮ್ಮ ಧರ್ಮವಲ್ಲವೇ?

**ಸು:**— ತನ್ನನ್ನುದ್ಧರಿಸಬೇಕೆಂದು ಅವಳೇನೂ ನಿನ್ನಲ್ಲಿ ಮೊರೆಯಿಡಲಿಲ್ಲ. ನೀನೇ ಏನೇನೋ ಕಲ್ಪಿಸಿಕೊಂಡು ಮುಂದುವರಿವುದು. ಧರ್ಮ, ಕರ್ತವ್ಯ ಎನ್ನುವುದು.

**ನೇ:**—ಅವಳೇನೋ ಆಪತ್ತಿಗೊಳಗಾಗಿದ್ದಾಳೆಂದು ನೀವೂ ಒಪ್ಪುತ್ತೀರಷ್ಟೆ!

**ಸು:**— ಇರಬಹುದು. ಅದಕ್ಕೆಯೇ ಹೇಳಿದೆ; ಗುಪ್ತಚರರಿಂದ ಅವಳಿದ್ದ ಸ್ಥಳವನ್ನು ಗೊತ್ತುಹಚ್ಚುವ, ಎಂದು.

**ನೇ:**—ಸ್ವಕಾರ್ಯಕ್ಕೋಸ್ಕರ ಮಹಾರಾಜರ ಕಾರ್ಯಹಾನಿಯಾಗಬಾರದಲ್ಲವೇ? ಗುಪ್ತಚರರನ್ನು ನನ್ನ ಕೆಲಸಕ್ಕೆ ಹಚ್ಚಿದರೆ?

**ಸು:**—ಇದಕ್ಕೂ ಮಹಾರಾಜರ ಕಾರ್ಯಕ್ಕೂ ಏನು ಸಂಬಂಧ?

**ನೇ:**—ನಿಕಟವಾದ ಸಂಬಂಧವಿದೆ. ಈ ಮೊದಲೆ ರಾಜರ ಮೇಲೆ ಅಪವಾದವಿದೆ. ತಾರೆಯ ಶೋಧಕ್ಕೆ ಅವರು ಪ್ರಯತ್ನಿಸುತ್ತಾರೆಂದು ತಿಳಿದರೆ ಆ ಸಂದೇಹವು ಬಲಗೊಳ್ಳುವುದು.

**ಸು:**—ಓಹೋ! ತಾರೆಯನ್ನೆ ಆ ನಾಡಿನ ರಾಣಿಯನ್ನಾಗಿ ಪಟ್ಟಕ್ಕೇರಿಸುವಾಗ ಅಪರಾಧವು ನಿರಾಧಾರವಾದುದೆಂದು ಪ್ರತ್ಯಕ್ಷವಾಗುವುದು.

**ನೇ:**—ಆದರೆ, ಆ ಮೊದಲೆ ಮಹಾಯುದ್ಧವನ್ನು ಮಾಡುವ ಪ್ರಸಂಗ ವೊದಗಿದರೆ?

**ಸು:**—ಯಾರೊಡನೆ?

**ನೇ:**—ಏನು ಭಾವಯ್ಯ? ಮಹಾರಾಜರ ಮೇಲಿನ ಅಪವಾದದ ದುಷ್ಪರಿಣಾಮವನ್ನು ಬಹುಶಃ ನೀವು ತಿಳಿದಿಲ್ಲ.

**ಸು:**—ಸ್ವಾರ್ಥಪರರೂ ದುರುದ್ದೇಶಪೂರಿತರೂ ಆದ ಕೆಲವರು ನಾಯಕರು ಅದಕ್ಕೆ ಬೆಲೆಗೊಡಬಹುದು.

**ನೇ:**—ಅಲ್ಲ. ರಾಜರಲ್ಲಿ ಅಭಿಮಾನವಿದ್ದ ಹಲವರಲ್ಲಿ ಒಂದು ತೆರದ ಕ್ಷೋಭೆಯುಂಟಾಗಿದೆ. ಖಂಡೋಜಿ ಅವರನ್ನು ತನ್ನ ಕಡೆಗೆ ಒಲಿಸಿಕೊಳ್ಳುವ ಪ್ರಯತ್ನದಲ್ಲಿದ್ದಾನೆ.

**ಸು:**— ಹೂಂ—ಅವರು ಇಂದಲ್ಲದಿದ್ದರೆ ನಾಳೆಯಾದರೂ ಮಹಾರಾಜರನ್ನು ಇದಿರಿಸುವವರೇ? ಹೋಗಲಿ.

**ನೇ:**— ಆದರೆ, ಈ ಮೊದಲು ಮನಃಪೂರ್ವಕವಾಗಿ ಸಹಾಯಮಾಡುತ್ತಿದ್ದವರನ್ನೂ ನಾವು ಹಾಗೆ ತಿರಸ್ಕರಿಸುವುದೇ?

**ಸು:**— ಹಾಗಾದರೆ, ಮಹಾರಾಜರ ಸ್ವಭಾವವನ್ನು ತಿಳಿದೂ ಅವರು ಈ ದುಷ್ಟ ವರ್ತಮಾನವನ್ನು ನಂಬುವುದೇಕೋ?

**ನೇ:**— ಅವರು ಮಹಾರಾಜರ ಸ್ವಭಾವವನ್ನು ತಿಳಿದಿಲ್ಲ; ಅವರ ಮಹೋದ್ದೇಶವನ್ನು ತಿಳಿದಿದ್ದರು. ಸ್ವರಾಜ್ಯಸ್ಥಾಪನೆಗೆಂದು ನಮ್ಮ ಪಕ್ಷವನ್ನು ವಹಿಸಿದರು; ಸಹಾಯವನ್ನು ಮಾಡಿದರು.

**ಸು:**— ಸ್ವರಾಜ್ಯಸ್ಥಾಪನೆಯಾಗಲಿಲ್ಲವಷ್ಟೆ! ಅವರೀಗ ಮಹಾರಾಜರನ್ನು ವಿರೋಧಿಸುವುದೇಕೋ?

**ನೇ:**— ಮಹಾರಾಜರಿಂದ ಈ ದುಷ್ಕೃತ್ಯವು ಘಟಿಸಿತೆಂಬ ಹೇಳಿಕೆ ನಿಜವಾದರೆ ಅವರ ಅಲ್ಪತೆಯನ್ನೂ ಸ್ವಾರ್ಥಪರತೆಯನ್ನೂ ಇದು ಉದ್ಘೋಷಿಸುತ್ತದಲ್ಲವೇ? ಅಂತಹ ಮಹಾರಾಜರಲ್ಲಿ ಮಹೋದ್ದೇಶವಿದೆಯೆಂದರೆ ನಂಬುವವರಾರು?

**ಸು:**— ಎಂತೂ ಅವರೆಲ್ಲರೂ ಖಂಡೋಜಿಯನ್ನು ಸೇರುವರು, ಮಹಾರಾಜರನ್ನು ಇದಿರಿಸುವರು, ಎಂದಾಯಿತು.

**ನೇ:**— ಇಲ್ಲ! ಇನ್ನೂ ಅಷ್ಟು ಮುಂದೆ ಹೋಗಿಲ್ಲ. ಹಲವರಲ್ಲಿ ಮಹಾರಾಜರ ವಿಷಯವಾಗಿ ಮೊದಲು ತಾತ್ಸಾರವುಂಟಾಗಿದ್ದರೂ ಈಗ ಅದು ಕಡಮೆಯಾಗುತ್ತಿದೆ.

**ಸು:**— ಅದಕ್ಕೇನು ಕಾರಣವೋ?

**ನೇ:**— ಖಂಡೋಜಿಯ ಕುತಂತ್ರವು ಮತ್ತು ನಿರ್ದಯಸ್ವಭಾವವು.— ತಾರೆಯಿಲ್ಲದುದರಿಂದ ನೆರೆಹೊರೆಯ ನಾಯಕರಲ್ಲಿ ಖಂಡೋಜಿಯ ನಿಸ್ಪೃಹತೆಯಲ್ಲಿ ಸಂದೇಹವುಂಟಾಗಿದೆ. ಈಗಣ ಅವನ ರಾಜ್ಯಭಾರಕ್ರಮದಿಂದಾಗಿ ಅದು ಬೆಳೆಯುತ್ತಿದೆ.

**ಸು:**— ಇಷ್ಟೆಲ್ಲ ನನಗೆ ತಿಳಿದಿದೆ. ಪಾಪ! ಚತುರನಾದ ಆ ಖಂಡೋಜಿಗೆ ತಿಳಿದಿಲ್ಲ, ಅಲ್ಲವೇ?

**ನೇ:**—ಓಹೋ! ಅವನೂ ತಿಳಿದಿದ್ದಾನೆ. ಆದರೆ, ದುರ್ಮಾರ್ಗವು ಯಾವಾಗಲೂ ವಕ್ರವೇ! ಒಂದು ಅಪರಾಧವನ್ನು ಅಡಗಿಸಲಿಕ್ಕೆಂದು ಇನ್ನೊಂದನ್ನು ಮಾಡುತ್ತಾನೆ, ಪಾಪ!

**ಸು:**—ತಾರೆಯನ್ನಿದಿರಿಟ್ಟುಕೊಂಡು ತನ್ನ ಕೆಲಸವನ್ನು ಮಾಡದೆ, ಅವಳನ್ನೇಕೆ ಅಡಗಿಸಿದ್ದಾನೆ, ಅವನು?

**ನೇ:**—ಅದನ್ನು ತಿಳಿಯಲಾರೆನು. ಅವಳು ಯಾತ್ರೆಗೆ ಹೋಗಿದ್ದಾಳೆಂದೂ ಇನ್ನು ಅಲ್ಪಾವಧಿಯಲ್ಲಿಯೇ ಹಿಂದಿರುಗುವಳೆಂದೂ ಸ್ವಾಭಿಮಾನವುಳ್ಳ ನಾಯಕರೆಲ್ಲ ಪುರಾತನ ಮೋರೆವಂಶಕ್ಕಾದ ಅಪಮಾನಕ್ಕೆ ತಕ್ಕ ಪ್ರತೀಕಾರವನ್ನು ಮಾಡುವುದರಲ್ಲಿ ಸಹಾಯಕರಾಗಬೇಕೆಂದೂ ಅವಳ ಪರವಾಗಿ ಅವನು ನಾಯಕರಿಗೆಲ್ಲ ವಿಜ್ಞಾಪನೆಯನ್ನು ಕಳುಹಿಸಿದ್ದಾನೆ. ಅದನ್ನು ಅನೇಕರು ಇನ್ನೂ ಮನ್ನಿಸಿಲ್ಲ.—ಆದರೆ ತಾರೆಯ ಶೋಧವನ್ನು ಮಹಾರಾಜರು ಮಾಡುತ್ತಿದ್ದಾರೆಂದು ಜನಜನಿತವಾದರೆ ಖಂಡೋಜಿಯ ತಂತ್ರವು ಫಲಕಾರಿಯಾಗಬಹುದು.

**ಸು:**—ನೇತಾ! ನೀನು ಬಹಳ ಚಾಣಾಕ್ಷನಾಗಿದ್ದೀ. ಎಲ್ಲ ವಿಷಯಗಳನ್ನು ಮೊದಲೆ ತಿಳಿದಿದ್ದೀ; ಸ್ಥಿತಿಗತಿಗಳ ವಿಮರ್ಶೆಯನ್ನು ಕೇಳಿ ಸಂತೋಷವಾಯಿತು.

**ನೇ:**—ಭಾವಾ! ನಿಮ್ಮ ಉಪದೇಶದ ಫಲ. ರಾಜನೀತಿಯನ್ನು ಬೋಧಿಸಿದವರು ನೀವೇ ಅಲ್ಲವೆ?

**ಸು:**—ಏನಿದ್ದರೂ ತಾರೆ ಸದ್ಯದಲ್ಲಿಯೇ ಹಿಂದಿರುಗಬಹುದಷ್ಟೆ! ಅವಳ ಶೋಧನೆಯ ವಿಷಯದಲ್ಲಿ ನಿನಗೇಕಿಷ್ಟು ಆತುರವು?

**ನೇ:**—ಭಾವಾ! ಖಂಡೋಜಿಯ ಕೃತ್ರಿಮವೇ ನನಗಿನ್ನೂ ತಿಳಿಯಲಿಲ್ಲ. ಅವನಲ್ಲಿ ದುರುದ್ದೇಶವಿದೆಯೆಂಬುದರಲ್ಲಿ ಸಂದೇಹವಿಲ್ಲ. ಆದರೆ ಅದೇನೆಂದು ತಿಳಿವುದಿಲ್ಲ. ಏನೋ, ತಾರೆಯನ್ನು ಕಂಡು ಮಾತನಾಡಿದ ವಿನಾ ನನ್ನ ಮನಸ್ಸಿಗೆ ಸಮಾಧಾನವಿಲ್ಲ.

**ಸು:**—ಹೂಂ!—ಪ್ರಯತ್ನಿಸು! ಮುಂಜಾಗ್ರತೆಯಿಂದ ವರ್ತಿಸು. ಕಾರ್ಯಕ್ರಮವನ್ನು ನನಗೆ ತಿಳಿಸದೆ ದುಡುಕಬೇಡ. ನಮ್ಮ

ಮೆಚ್ಚಿನ ಕೆಲವು ಸೈನಿಕರಾದರೂ ಗುಪ್ತವೇಷದಲ್ಲಿ ಸಮೀಪ ದಲ್ಲಿಯೇ ಇರುವಂತೆ ವ್ಯವಸ್ಥೆಯಿರಲಿ.

**ನೇ:**—ಭಾವಾ! ಇನ್ನೊಂದು ಆಲೋಚನೆಯಿದೆ.

**ಸು:**—ತಾರುಣ್ಯದಲ್ಲಿ ಹೀಗೆಯೇ—ಕಲ್ಪನಾಸಾಮ್ರಾಜ್ಯದಲ್ಲಿ ಓಲಾಡು ವುದು!

**ನೇ:**—ವಿಶಾಲಗಡಕ್ಕೆ ಹೋಗಿ ಖಂಡೋಜಿಯನ್ನು ನೋಡಿ ಮಾತಾಡ ಬೇಕೆಂದು.

**ಸು:**—ಓಹೋ! ಬಹಳ ದೊಡ್ಡ ಆಲೋಚನೆ! ನಿನಗೆ ಸ್ವಲ್ಪ ಬುದ್ಧಿ ಕೆಟ್ಟಿರಬೇಕು.

**ನೇ:**—ಖಂಡೋಜಿ ಬಹಳ ಸಮರ್ಥನಲ್ಲವೆ, ಭಾವಾ? ಅವನನ್ನು ನಮ್ಮ ಪಕ್ಷಕ್ಕೆ ತಿರುಗಿಸಿದರೆ . . .!

**ಸು:**—ಒಮ್ಮೆ ಅವನು ತಂತ್ರಗಾರನು, ದುಷ್ಟನು; ಇನ್ನೊಮ್ಮೆ ಅವನು ಸಮರ್ಥನು ಅಲ್ಲವೇ?—ಹುಲಿಯ ಗವಿಯನ್ನು ಹೊಗಬೇಡ, ನೇತಾ!

**ನೇ:**—ಹುಲಿಯಾದರೇನು? ಧೈರ್ಯದಿಂದ ಸಮೀಪಿಸುವವನಿಗೆ ಅದು ಅಂಜುತ್ತದಲ್ಲವೇ?

**ಸು:**—ಆದರೆ, ಅವನು ಹಿಂದಿರುಗಿದಾಗ ಅವನನ್ನು ಹಿಡಿಯುತ್ತದೆ.

**ನೇ:**—ಹುಲಿಯನ್ನೆ ಸ್ತಂಭನಗೊಳಿಸುವ ಮಂತ್ರವಿದ್ದರೆ? ಭ್ರಾಂತಿ ಗೊಳಿಸುವ ಶಕ್ತಿಯಿದ್ದರೆ? ಅಲ್ಲದೆ, ಅಲ್ಲಿ ಖಂಡೋಜಿಯು ಅಧಿ ಕಾರವಾದರೂ ನನ್ನ ಕೂದಲು ಕೂಡ ಕೊಂಕಲಿಕ್ಕಿಲ್ಲ. ನನ್ನ ಪಕ್ಷಪಾತಿಗಳೂ, ನನ್ನಲ್ಲಿ ಅಭಿಮಾನವುಳ್ಳವರೂ ಇನ್ನೂ ಅಲ್ಲಿ ಎಷ್ಟೋ ಜನರಿದ್ದಾರೆ. ಆದುದರಿಂದ ಭಯವಿಲ್ಲ.

**ಸು:**—ನಿನ್ನೊಡನೆ ಚರ್ಚಿಸಿ ಫಲವಿಲ್ಲ. ವೇಷಪಲ್ಲಟಿಸಿಕೊಂಡು ಕೆಲವು ಸೈನಿಕರು ಅಲ್ಲಿಗೆ ಹೋಗುವಂತೆ ಆಜ್ಞಾಪಿಸುತ್ತೇನೆ.

**ನೇ:**—ಭಾವಾ! ಅಗತ್ಯವಿಲ್ಲ; ಇನ್ನು ನಿಮ್ಮಿಚ್ಛೆ. ನನ್ನನ್ನು ಆಶೀರ್ವದಿ ಸಿರಿ. ನಾನು ನಾಳೆ ಮುಂಜಾನೆಯೇ ವಿಶಾಲಗಡಕ್ಕೆ ಹೋಗು ವೆನು!

**ಸಂ:**—ಆಗಲಿ! ಯಶಸ್ವಿಯಾಗಿ ಬಾ! ನಾನೂ ಜಾವಳಿಯ ಅರಣ್ಯದಲ್ಲಿ ಸ್ವಲ್ಪ ಶೋಧವನ್ನು ಮಾಡುತ್ತೇನೆ.

— — —

## ದೃಶ್ಯ ೩

(ವಿಶಾಲಗಡದ ಹೊರಗೆ ಒಂದು ಹಳ್ಳಿಯಲ್ಲಿ ಹಳ್ಳಿಯವರಿಬ್ಬರು ಮಾತನಾಡುತ್ತಿದ್ದಾರೆ.)

**ಮೊದಲನೆಯವನು:** – ಸಾಕಪ್ಪ! ಸಾಕು! ಈ ಹಾಳು ಜೀವನ ಸಾಕು!

**ಎರಡನೆಯವನು:**— ಬಹಳ ಸುಲಭ! ಮುಗಿಸಿದೆಯಾ ಜೀವನವನ್ನು?

**ಮೊ:**— ಮುಗಿಸುವುದೆಲ್ಲಿ? ಬಂದುದನ್ನು ಅನುಭವಿಸಬೇಕು.

**ಎ:**— ಅದೀಗ. ಹೊಟ್ಟೆಬಟ್ಟೆಗಿಲ್ಲದಿದ್ದರೂ ತುಂಬಬೇಕು ಅವನ ಖಜಾನೆಯನ್ನು.

**ಮೊ:**—ಬಕಾಸುರನ ಹೊಟ್ಟೆಯಂತೆ ಆ ಬೊಕ್ಕಸ. ನಾವಾಗಿ ಕೊಡುವುದು; ಅವನಾಗಿ ಕಸಿದುಕೊಳ್ಳುವುದು—ಇನ್ನು ಅವನ ಕಡೆಯವರು ಸೆಳೆದುಕೊಂಡು ಹೋಗುವುದನ್ನು ಕೇಳುವವರೇ ಇಲ್ಲ!

**ಎ:**—ಈ ತಿಂಗಳಲ್ಲಿ ಎರಡು ಸಲವಾಯ್ತು; ಎರಡು ಸಲ, ನನ್ನ ಮನೆ ಸುಲಿಗೆ. ಈ ವರ್ಷ ಬೆಳೆದುದೆಲ್ಲ ಹೋಯಿತು. ಇನ್ನು ಹಟ್ಟಿಯಲ್ಲಿ ಮೂರು ನಡೆಗಳು ಮಾತ್ರ ಇವೆ.

**ಮೊ:**— ಅವುಗಳಿಗೂ ಕಾಲ ಬರುತ್ತದೆ—ಅದಿರಲಿ; ಇಷ್ಟೆಲ್ಲ ಹಣವನ್ನು ಏಕೆ ಕೂಡಿಡುತ್ತಾನೋ, ಮಹಾರಾಯ?

**ಎ:**—ಹೇಳಿದೆನಲ್ಲ? ಬೊಕ್ಕಸವು ಬರಿದಾಗಿದೆಯಂತೆ; ದೊಡ್ಡ ಕಾಳಗವಾಗಬಹುದಂತೆ; ಅದಕ್ಕೆ ಈಗಲೇ ಹಣಕೂಡಿಸುವುದಂತೆ.

**ಮೊ:**— ಈ 'ಅಂತೆ'ಯಲ್ಲಿ ನಾವು ಬದುಕುವುದಿಲ್ಲವಂತೆ.

**ಎ:**—ಅದರಿಂದ ಅವನಿಗೆ ತೊಂದರೆಯಿಲ್ಲವಂತೆ.

**ಮೊ:**—ದೊಡ್ಡ ಪೀಡೆಯಪ್ಪ ಇದು! ನಾನೇನೋ ಹೆಂಡತಿಮಕ್ಕಳೊಡನೆ ಊರುಬಿಡುವುದೆಂದು ನಿಶ್ಚಯಿಸಿದ್ದೇನೆ.

ಎ:—ಊರು ಬಿಡುವುದು ಸುಲಭ. ಹೋಗುವುದಾದರೂ ಎಲ್ಲಿಗೆ?

ಮೊ:—ಶಿವಾಜಿ ಮಹಾರಾಜರಿದ್ದಲ್ಲಿಗೆ,-ಅವರನ್ನುಬೇಡಿಕೊಳ್ಳುವುದು.

ಎ:—ಪಾಪ! ಎಲ್ಲರೂ ಹಾಗೆಯೇ ಬೇಡಿಕೊಂಡರೆ ಅವರೇನು ಮಾಡುವುದು?

ಮೊ:—ಅವರು ಪಾಪಪುಣ್ಯ ತಿಳಿದವರು. ಕೋಟೆಯ ಸುತ್ತುವರಿದು ಇದ್ದ ಕಾಡನ್ನು ಕಡಿಸಿ ಹೊಲಗಳನ್ನು ಮಾಡಿದ್ದಾರೆ. ಅಲ್ಲಿಗೆ ಹೋದವರಿಗೆ ಬೇಸಾಯಕ್ಕೆ ಹೊಲಗಳನ್ನು ಕೊಡುತ್ತಾರೆ.

ಎ:—ಇಲ್ಲಿ ಬೇಸಾಯಮಾಡಿ ಆಯಿತಲ್ಲ! ಇಲ್ಲಿಯ ಹೊಲಗಳನ್ನು ಬಿಡುವುದು—ಅಲ್ಲಿ ನಮ್ಮ ಉದ್ಧಾರವಾಗಲಿಕ್ಕಿದೆ.

ಮೊ:—ಉದ್ಧಾರವಾಗಬೇಕೆಂದೇ ನಮಗೆ ಸಹಾಯಮಾಡುವುದು. ಇನ್ನು ನಮ್ಮ ಪೂರ್ವಪುಣ್ಯ.

ಎ:—ಏನು? ಇದು ನಿಜವೆ? ಅಲ್ಲ ಜನರಾಡಿಕೊಳ್ಳುವುದೇ?

ಮೊ:—ಸುಳ್ಳೇಕೆ ಆಡುತ್ತಾರೆ? ಎಷ್ಟು ಜನರು ಹೋಗಿದ್ದಾರೆ ಈ ಮೊದಲು! ನಾನೂ ಹೋಗುತ್ತೇನೆಂದೆನಲ್ಲ!

ಎ:—ಇಲ್ಲಿ ಏನು ಮಾಡಲಿಕ್ಕಿದೆ? ಉತ್ತು ಬಿತ್ತಿ ಬೇಸಾಯಮಾಡಿದುದ ದನ್ನು ಎಲ್ಲ ಹೊತ್ತುಕೊಂಡು ಹೋದರೆ—?

ಮೊ:—ಹೊಟ್ಟೆಗೆ ಕೈಹಿಡಿದುಕೊಳ್ಳುವುದು.

ಎ:—ಇಲ್ಲಿದ್ದರೆ, ಅದೇ ಗತಿ!

ಮೊ:—ಅದಿರಲಿ; ನಮ್ಮ ರಾಣೀಸಾಹೇಬರು ಯಾವಾಗ ಬರುವರೊ?

ಎ:—ಅಯ್ಯೋ! ಅವರಿನ್ನು ಬರುವುದೆಲ್ಲಿ?

ಮೊ:—ಯಾತ್ರೆಗೆ ಹೋದವರ ಸುದ್ದಿಯೇ ಇಲ್ಲವಲ್ಲ!

ಎ:—ಅವರ ಸುದ್ದಿ ನಾಯಕರಿಗೇಕೆ? ಅವರು ಹಿಂದಿರುಗದಿದ್ದರೆ ನಮ್ಮ ನಾಯಕರಿಗೆ ಸುಖವೇ!

ಮೊ:—ಅಯ್ಯೋ! ದೇವರೇ! ಈ ದುಷ್ಟನೇ ಇಲ್ಲಿ ರಾಜನಾಗಿರುವುದೇ?

ಎ:—ಏನೋ ಎಲ್ಲ ಸುದ್ದಿಗಳು! ನಮ್ಮ ಕಾಡಲ್ಲಿ ಮಹಾ ಯೋಗಿಗಳಿದ್ದಾರಲ್ಲ? ಅಲ್ಲಿಗೆ ನಮ್ಮ ನಾಯಕರು ಒಮ್ಮೆ ಹೋದರಂತೆ;

ರಾಣೀಸಾಹೇಬರು ಯಾವಾಗ ಬರಬಹುದೆಂದು ಕೇಳಿದರಂತೆ,—ಇನ್ನು ಆರು ತಿಂಗಳು ಅವರಿಗೆ ಗ್ರಹಚಾರವಿದೆ; ಆ ಮೇಲೆ ಬರುತ್ತಾರೆ, ಎಂದರಂತೆ.

**ಮೊ:**—ಬಂತಲ್ಲ ನಿಮ್ಮ 'ಅಂತೆ'ಯ ಕಂತೆ.

**ಎ:**—ನಾನು ನೋಡಿದುದಲ್ಲ; ಕೇಳಿದುದು. ಆದುದರಿಂದ 'ಅಂತೆ' ಎಂದೆ.

**ಮೊ:**—ಅದಿರಲಿ—ಆ ಯೋಗಿಗಳ ವಿಷಯವೇನು? ಜನರೇನೋ ಎಲ್ಲ ಹೇಳುತ್ತಾರೆ.

**ಎ:**—ಏನು? ಅವರ ಪ್ರಭಾವವೇ? ನಮ್ಮ ನೆರೆಮನೆ "ಸುಬ್ಬಿ"ಗೆ ಇತ್ತಲ್ಲ, ಏನೋ, ಭೂತವೋ ಪ್ರೇತವೋ ಹಿಡಿವುದು; ಅವಳನ್ನು ಅಲ್ಲಿಗೆ ಕರೆದುಕೊಂಡು ಹೋಬರು. ಅಲ್ಲಿ ನಡೆದ ಕತೆ ಬಹಳ ವಿಚಿತ್ರ. ಸಾಧುಗಳು ತಮ್ಮ ಹೋಮಕ್ಕೆ ಒಂದು ಹಣ್ಣು ಹಾಕಿದ್ದೇ ಸರಿ; ಅವಳು ಬೊಬ್ಬಿಟ್ಟಳಂತೆ. ಅವಳ ಮುತ್ತಾತನ ಕಾಲದ ಕತೆಯನ್ನೂ ಹೇಳಿ ತಾನು ಬಿಟ್ಟುಹೋಗುತ್ತೇನೆಂದಿತಂತೆ ಆ ಪ್ರೇತವು. ಅವಳಿಗೆ ಆ ಮೇಲೆ ಭಸ್ಮವನ್ನು ಮಂತ್ರಿಸಿ ಕೊಟ್ಟಿದ್ದಾರೆ. ಅವಳು ಈಗ ಎಷ್ಟು ಸುಖವಾಗಿದ್ದಾಳೆ!

**ಮೊ:**—ನನಗೇನೂ ತಿಳಿವುದಿಲ್ಲ! ನನ್ನ ಹೆಂಡತಿಯ ಅಣ್ಣನಿದ್ದಾನಲ್ಲ—ಅವನಿಗೂ ನನಗೂ ಸ್ವಲ್ಪ ಹಾಗೆ ಹಾಗೆ—ಅವನ ಅತ್ತೆಯನ್ನು ಅಲ್ಲಿಗೆ ಕರೆದುಕೊಂಡು ಹೋದನು.

**ಎ:**—ಯಾರನ್ನು? ಆ ಕುರುಡಿಯನ್ನೆ?

**ಮೊ:**—ಹಾ! ಅವಳನ್ನೆ! ಸುಮಾರು ಇಪ್ಪತ್ತು ವರ್ಷವಾಯಿತೋ ಏನೋ, ಅವಳ ಕಣ್ಣು ಹೋಗಿ? . . .

**ಎ:**—ಈಗ ಕಣ್ಣು ಕಾಣುತ್ತದೆಯೇ, ಅವಳಿಗೆ?

**ಮೊ:**—ಹಾಗೆ ಹೇಳುತ್ತಾರೆ. ಈಗ ಅವಳು ತನ್ನ ಕೆಲಸಕ್ಕೆ ಹೋಗಿ ಬರುತ್ತಾಳೆಂದು ನಮ್ಮಾಕೆ ಹೇಳುತ್ತಾಳೆ.

**ಎ:**—ಆಶ್ಚರ್ಯ! ವಿಚಿತ್ರವಲ್ಲವೇ ಇದು!

**ಮೊ:**—ಯೋಗಿಗಳಲ್ಲಿ ಎಂತೆಂತಹವರಿಲ್ಲ!

**ಎ:**— ನಾನೂ ನಾಳೆ ಅವಳನ್ನು ಕರೆದುಕೊಂಡುಹೋಗಬೇಕೆಂದಿದ್ದೇನೆ.

**ಮೊ:**— ಓಹೋ? ಹೆಂಡತಿಯನ್ನೆ? ಬಹಳ ಪುಣ್ಯಕಟ್ಟಿಕೊಳ್ಳುವ ಆಲೋಚನೆ?

**ಎ:**— ನಾನು ಪಾಪಿಯಷ್ಟೆ!—ಆದರೆ, ಅವರು ಹಣ್ಣನ್ನು ಮಂತ್ರಿಸಿ ಕೊಟ್ಟರೆ . . .

**ಮೊ:**— ಓಹೋ! ಮಕ್ಕಳಾಗಬೇಕೆಂಬ ಬಯಕೆ, ಅಲ್ಲವೇ?

**ಎ:**— ಅದು ಎಲ್ಲರಿಗೂ ಇರುವುದು ಸಹಜ!

**ಮೊ:**— ಮಕ್ಕಳ ಗೋಳು ಸಾಕಪ್ಪಾ! ಇಲ್ಲದವನಿಗೆ ಇಲ್ಲವೆಂಬ ಒಂದೇ ಚಿಂತೆ! ಇದ್ದವರಿಗೆ ಅವನ್ನು ಹೇಗೆ ಸಾಕುವುದೆಂದು ಸದಾ ಚಿಂತೆ. ಸಾಕಿದ ಮೇಲೆ ಇಕೊಳ್ಳಿ, ನನ್ನ ಹಿರಿಯ ಮಗನನ್ನು ಎಳೆದು ಕೊಂಡು ಹೋದರಲ್ಲಾ!

**ಎ:**— ಎಲ್ಲಿಗೆ? ಯಾರು?

**ಮೊ:**— ಮಕ್ಕಳ ಸುಖ! ಏನು ಹೇಳುವುದು? ನಾಯಕರ ಅಪ್ಪಣೆ- "ಕಾಡಲ್ಲಿ ರಸ್ತೆಯೋ ಸುರಂಗವೋ ಏನೋ ಆಗಬೇಕು; ಬರಲಿ, ಆ ಕೆಲಸಕ್ಕೆ" ಎಂದು.

**ಎ:**— ಸರಿ! ಬೊಗಸೆ ತುಂಬ ಸಂಬಳ ಬರುತ್ತದೆ.

**ಮೊ:**— ಏನು ಸಂಬಳ? ಸಂಬಳ, ಉಂಬಳ! ಸಂಬಳದಿಂದ ಮನೆಯು ಲ್ಲಿದ್ದುದೆ ಹೋಯಿತಲ್ಲ.

**ಎ:**— ಹಾಗೆ, ಮನಸ್ಸಿಲ್ಲದಿದ್ದರೆ ಕಳುಹಿಸಿದುದು ಏಕೋ?

**ಮೊ:** — ಕಳುಹಿಸಿದುದೇ? ಯಾರು? ನಾನೇ?

**ಎ:**— ನೀವಲ್ಲದಿದ್ದರೆ ನಿಮ್ಮಾಕೆ?

**ಮೊ:**— ಅಲ್ಲಪ್ಪಾ! ಬಲಾತ್ಕಾರದಿಂದ ಎಳೆದುಕೊಂಡು ಹೋದುದು.

**ಎ:**— ಹಾ! ಹಾ! (ನಕ್ಕು) ಏನು ಕುರಿಮರಿಯೇ? ಹಾಗೆ ಎಳೆದು ಕೊಂಡು ಹೋಗಲಿಕ್ಕೆ?

**ಮೊ:**— ನಿಮಗೆ ಮಕ್ಕಳಿಲ್ಲ, ಈ ಕತೆ ಗೊತ್ತಿಲ್ಲ. "ಗಟ್ಟಿಮುಟ್ಟಾದವರೆಲ್ಲ ಬಿಟ್ಟಿಗೆ ಬರಬೇಕೆಂದು ನಾಯಕರ ಅಪ್ಪಣೆ—ಹೂಂ! ಹೊರಡಲಿ" ಎಂದರು ಸೈನಿಕರು. ಅವನೇ ದೊಡ್ಡಮಗ; ದುಡಿವವನೊಬ್ಬನೇ

ಎಂದು ಗೋಳಿಟ್ಟೆ. ಕೇಳುವವರಾರು? ರಟ್ಟೆಗೆ ಕೈಹಾಕಿ ಎಳೆಯಲು ಆರಂಭ. ಹೇಳಿದೆ ಅವನಿಗೆ; "ಅಲ್ಲಿಯಾದರೂ ಸುಖದಲ್ಲಿರಪ್ಪಾ" ಎಂದೆ.

**ಎ:**—ಏನು? ಹೀಗೂ ಉಂಟೇ? ಎಂತಹ ರಾಜ್ಯವಪ್ಪ ಇದು! ತೆರಿಗೆ ತೆರಿಗೆಯೆಂದು ಮನೆಯಲ್ಲಿದ್ದುದನ್ನೆಲ್ಲಾ ದೋಚಿಕೊಂಡು ಹೋಗುವುದು. ಬಿಟ್ಟಿಗೆಂದು ಜನರನ್ನೂ ಎಳೆದುಕೊಂಡು ಹೋಗುವುದಾದರೆ ಕಷ್ಟ!

**ಮೊ:**—ಯಾರಲ್ಲಿ ಹೇಳುವುದು? "ದೇವರೇ" ಎನ್ನುವುದು.

**ಎ:**—ಇನ್ನು ಇಲ್ಲಿ ಕಾಲಕ್ಷೇಪವಾಗುವಂತಿಲ್ಲ. ನಾನೂ ಮತ್ತೇನು? ಅಣ್ಣನ ಮಕ್ಕಳೆಲ್ಲ ಮೊದಲೆ ಊರುಬಿಟ್ಟಿದ್ದಾರೆ. ಆಗಲಿ, ನಾಳೆ ಹೋದವನು ಸಾಧುಗಳ ಹತ್ತಿರ ಕೇಳಿಬಿಡುತ್ತೇನೆ.

**ಮೊ:**—ಏನೆಂದು?

**ಎ:**—ಪುರಂದರಕ್ಕೆ ಹೋದರೆ ನನ್ನ ಸ್ಥಿತಿ ಸುಧಾರಿಸಬಹುದೋ ಎಂದು.

**ಮೊ:**—ಓಹೋ, ಹಾಗೆ ಕೇಳಿದರೆ ನಿನ್ನ ಸ್ಥಿತಿ ನೆಟ್ಟಗಾಗುತ್ತದೆ. ಮೊನ್ನೆ ಯಾರೋ ಯೋಗಿಗಳಿದಿರಲ್ಲೆ ಇಲ್ಲಿಯ ಸಂಕಷ್ಟಗಳನ್ನು ಹೇಳಿ ಬಿಟ್ಟರಂತೆ. ಅವರು ಹಿಂದೆ ಬರುವಾಗಲೆ ಅವರಿಗೆ "ಮಾವನ ಮನೆ"—ಸೆರೆಮನೆ.

**ಎ:**—ಹಾಗೆಂದರೆ? ಮಾತನಾಡಲಿಕ್ಕೂ ಸ್ವಾತಂತ್ರ್ಯವಿಲ್ಲವೇ?

**ಮೊ:**—ಇದೆಯಪ್ಪಾ! ಹೇಳಿ! ನಮ್ಮ ನಾಯಕರಷ್ಟು ಒಳ್ಳೆಯವರಿಲ್ಲ; ಅವರ ಸರಕಾರವೇ ಸರಕಾರವೆಂದು. ಯಾರು ನಿಮ್ಮನ್ನು ಮುಟ್ಟುತ್ತಾರೆ?

**ಎ:**—ಒಳ್ಳೆಯ ಕತೆ ಇದು; ಇದ್ದ ಸ್ಥಿತಿಯನ್ನು ಹೇಳಬಾರದು, ಅಲ್ಲವೆ?

**ಮೊ:**—ಇದ್ದುದೋ, ಇಲ್ಲದುದೋ; ಸರಕಾರಕ್ಕೆ ವಿರೋಧವಾಗ ಬಾರದು.

**ಎ:**—ಒಳ್ಳೆಯ ಸರಕಾರವಿದು. ಈ ನಾಡಿಂದ ಓಡಿಹೋಗುವುದೇ ಒಳ್ಳೆಯದು. ನಾವು ಜತೆಯಲ್ಲಿಯೇ ಹೋಗುವ!

**ಮೊ:**— ನಾನು ಯಾವಾಗಲೂ ಸಿದ್ಧನೇ. ಆದರೆ ಹೋಗಬೇಕಾದರೆ ಸಾಧುಗಳ ಭೇಟಿ ಮಾಡಿಕೊಂಡೇ ಹೋಗಬೇಕು. ಅಷ್ಟು ದೂರ ಹೋದ ಮೇಲೆ, ಅದಕ್ಕೋಸ್ಕರ ಬರುವುದೆಂದರೆ ಸ್ವಲ್ಪ ಕಷ್ಟ.

**ಎ:**— ಸರಿ, ನಾಳೆಯೇ ಹೊರಡುವುದು; ಅಲ್ಲಿಂದಲೇ ಪುರಂದರಕ್ಕೆ ಹೋಗುವುದು.

## ದೃಶ್ಯ ೪

(ವಿಶಾಲಗಡದ ಅರಮನೆ, ಖಂಡೋಜಿಯ ಓಲಗಸಾಲೆ. ಖಂಡೋಜಿ ಮತ್ತು ಸಾವಳ್ಯ ಇವರಿಬ್ಬರು ಮಾತನಾಡುತ್ತಿದ್ದಾರೆ.)

**ಖಂ:**— ಸಾವಳ್ಯ, ನಮ್ಮ ಕೆಲಸವು ಹೇಗೆ ಸಾಗುತ್ತಿದೆ?

**ಸಾ:**— ಓಹೋ! ಪ್ರತಿದಿವಸವೂ ಯೋಗಿಗಳ ಭೇಟಿಗೆಂದು ಬರುವವರೆಷ್ಟು ಮಂದಿ! ಮಹಾತ್ಮರಲ್ಲವೇ? ಹತ್ತು ಕೇಳಿದರೆ ಒಂದು ಮಾತು ಹೇಳುತ್ತಾರೆ. ಆ ಒಂದು ಮಾತನ್ನು ಕೇಳಲಿಕ್ಕೆ ಜನರ ಕುತೂಹಲವೇನು!

**ಖಂ:**— ಹೂಂ! ಮಾವಯ್ಯನವರು ಹೇಗೆ?

**ಸಾ:**— ಆ ಸಾಧುಗಳಿಗೆ ಯೋಗ್ಯರಾದ ಶಿಷ್ಯರು. ಗುರುಗಳು ಸಮಾಧಿಯಲ್ಲಿರುವಾಗ ಪುಣ್ಯಕಥೆಗಳನ್ನು ಹೇಳುವುದು; ಬಂದ ಕಾಣಿಕೆಗಳನ್ನು ಸ್ವೀಕರಿಸುವುದು; ಮಂತ್ರಿಸಿದ ಫಲಮಂತ್ರಾಕ್ಷತೆಗಳನ್ನು ಕೊಡುವುದು; ಸಮಾಧಾನ ಹೇಳುವುದು; ಮತ್ತಿದೆಯಲ್ಲ; ಒಮ್ಮೊಮ್ಮೆ ಓರೆಗಣ್ಣಿಂದ ನೋಡುವುದು. (ನಕ್ಕು)-ಅವರಿಗೆ ಒಂದು ಮಠವನ್ನು ಬೇಗನೆ ಕಟ್ಟಿಸಿಕೊಡಬೇಕು.

**ಖಂ:**—(ನಗುತ್ತಾ) ವೆಂಕು ಮಠದಲ್ಲಿರುವುದಾದರೆ ಅವರು ಅದನ್ನು ಬಿಟ್ಟು ನಮ್ಮ ರಾಜ್ಯದ ತಂಟೆಗೆ ಬರಲಿಕ್ಕಿಲ್ಲ. ಆಗಲಿ; ನಮ್ಮ ಜಾವಳಿಯವರು ಮಾತ್ರವೇ ಬರುವುದು ಅಲ್ಲಿಗೆ?

**ಸಾ:**—ಅಲ್ಲಪ್ಪ! ನಾಲ್ಕು ಕಡೆಗಳಿಂದಲೂ ಬರುತ್ತಾರೆ. ಎರಡು ಮೂರು ದಿವಸಗಳ ಪ್ರಯಾಣಮಾಡಿ ಬರುತ್ತಾರೆ. ರೋಗಿಗಳನ್ನು, ಕಣ್ಣುಕೈಕಾಲು ಇಲ್ಲದವರನ್ನು ಹೊತ್ತುಕೊಂಡು ಬರುತ್ತಾರೆ. ದರ್ಶನಕ್ಕೆಂದು ಬರುವವರು ಕೆಲವರು, ಆಶೀರ್ವಾದಕ್ಕೆಂದು ಕೆಲವರು; ನೋಡಿ ಹೋಗಲಿಕ್ಕೆಂದು ಇನ್ನಿತರರು.

**ಖಂ:**—ಯೋಗಿಗಳ ಪ್ರಭಾವವೇ ಅಂತಹದು.

**ಸಾ:**—ಕಾಯನ್ನು ಮಂತ್ರಿಸಿಕೊಟ್ಟರೆ ಮಕ್ಕಳಾಗುತ್ತವಂತೆ,–ಮಕ್ಕಳು!

**ಖಂ:**—(ಮುಗುಳ್ನಗೆಯಿಂದ) ಆಗಲಿ, ನಮ್ಮ ಹೇಳಿಕೆಗಳೆಲ್ಲ ಹಿಡಿದುವೆಂದಾಯಿತು.—ಅದಿರಲಿ ನಮ್ಮ ಇನ್ನೊಂದು ಕೆಲಸ?

**ಸಾ:**—ಅದೂ ಆಗುತ್ತ ಬಂತು. ಆಶ್ರಮದ ಮೂರು ಕಡೆಗಳಲ್ಲಿ ಸುಮಾರು ಐನೂರು ಮಾರು ಸುರಂಗವನ್ನು ತೋಡಿಯಾಯಿತು.

**ಖಂ:**—ಬರುವ ಜನರಿಗೇನಾದರೂ ಸಂಶಯಕ್ಕೆಡೆಯಿದೆಯೋ?

**ಸಾ:**—ಅಯ್ಯೋ! ಪಾಪ! ಹಳ್ಳಿಗಾಡಿನ ಜನರಿಗೆ ಸುರಂಗವೆಂದರೇನು ಗೊತ್ತು? ಅಲ್ಲದೆ ನಮ್ಮ ಕೆಲಸವು ಎಷ್ಟು ಜಾಗ್ರತೆಯಲ್ಲಿ ಸದ್ದಿಲ್ಲದೆ ಆಗುತ್ತದೆ!

**ಖಂ:**—ಬೆಳಕುಕಂಡಿಗಳ ವಿಚಾರ!

**ಸಾ:**—ನೀವು ಬಂದು ಹುಡುಕಿದರೂ ಅವನ್ನು ಗೊತ್ತುಹಚ್ಚಲಾರಿರಿ.

**ಖಂ:**—ಬೇಕಾದಷ್ಟು ಸಿಡಿಮದ್ದು ಒದಗಿದೆಯೋ?

**ಸಾ:**—ಓಹೋ! ಯಥೇಷ್ಟವಾಯಿತು! ಪರ್ಣಶಾಲೆಯ ಅಡಿಯಲ್ಲಿ ಸ್ವಲ್ಪ ಅಗೆದಾದ ಮೇಲೆ ಮದ್ದನ್ನು ಕೂಡಿಡುವುದೇ!

**ಖಂ:**—ಸಾವಳ್ಯ! ಇನ್ನು ಮತ್ತಷ್ಟು ಎಚ್ಚರಿಕೆಯಿಂದಿರಬೇಕು.

**ಸಾ:**—ನಾವೇನೋ ರಾತ್ರಿಯಲ್ಲಿಯೇ ಕೆಲಸಮಾಡುತ್ತಿದ್ದೇವೆ. ಆದರೆ ಈಗೀಗ ಕೆಲವರು ಹಳ್ಳಿಯವರು ಆಶ್ರಮದಲ್ಲಿಯೇ ರಾತ್ರಿಕಾಲದಲ್ಲೂ ನಿಲ್ಲುತ್ತೇವೆಂದು ಹಟಮಾಡುತ್ತಾರೆ.

**ಖಂ:**—ಛೇ! ಅದಾಗದು ಸಾವಳ್ಯ! ನಮ್ಮ ಗುಟ್ಟು ರಟ್ಟಾದೀತು.

**ಸಾ:**—ಆದರೆ, ಬಹುದೂರದಿಂದ ಬರುತ್ತಾರಲ್ಲ, ಅವರನ್ನೇನು ಮಾಡುವುದು? ಅದಕ್ಕೆ ನಾನೊಂದು ಉಪಾಯ ಮಾಡಿದ್ದೇನೆ. ದೂರದಲ್ಲಿ ಕೆಲವು ಗುಡಿಸಿಲುಗಳನ್ನು ಹಾಕಿಸಿದ್ದೇನೆ.

**ಖಂ:**—ಇದೇನು? ಸಾವಳ್ಯ!-ಇಷ್ಟೂ ವಿಚಾರವಿಲ್ಲವೇ? ಜನರು ಅಲ್ಲಿ ಉಳುಕೊಂಡರೆ ನಮ್ಮ ಕಾರ್ಯಭಾಗವು ತಿಳಿವುದಿಲ್ಲವೇ? ಹೂಂ—ಅವನ್ನು ಹೋದವನೆ ತೆಗೆಯಿಸಿ ಬಿಡು.

**ಸಾ:**—ಆದರೆ ಅಲ್ಲಿಯ ಕ್ರಮಗಳನ್ನು ಕೇಳಿ, ಆಮೇಲೆ ಅಪ್ಪಣೆಯಾಗಲಿ. ಆಹ್ನಿಕಕ್ಕೆ ಸಮಯವಾಯಿತೆಂದು ಹೊತ್ತು ಕಂತುವಾಗಲೆ ಜನರನ್ನು ಆಶ್ರಮದಿಂದ ಹೊರಗೆ ಕಳುಹಿಸುತ್ತೇವೆ. ಆದರೆ, ಬಹುದೂರದಿಂದ ಬಂದವರು ಹೋಗುವುದಾದರೂ ಎಲ್ಲಿಗೆ? ಅವರನ್ನು ಮಾತ್ರ ಗುಡಿಸಿಲುಗಳಲ್ಲಿ ಉಳುಕೊಳ್ಳಲಿಕ್ಕೆ ಬಿಡುತ್ತೇವೆ.—ಕಾಣಿಕೆಯಾಗಿ ಬರುವ ಹಣ್ಣುಕಾಯಿಗಳೆಷ್ಟು? ಅವನ್ನೆಲ್ಲಾ ಅವರೊಳಗೆ ಹಂಚುತ್ತೇವೆ. ಈ ಕ್ರಮದಿಂದ ಪ್ರಯೋಜನವಿದೆ. ಜನರ ಭಕ್ತಿ ಹೆಚ್ಚಾಗುತ್ತಿದೆ.

**ಖಂ:**—ಏನೋ, ನನ್ನ ಸಂದೇಹವು ಪರಿಹಾರವಾಗಲಿಲ್ಲ.

**ಸಾ:**—ಮರುದಿನ ಬೆಳಗ್ಗೆ ಅವರನ್ನೆಲ್ಲಾ ಗಡಿದಾಟಿಸಿ ಬರುತ್ತೇವೆ. ಅಲ್ಲದೆ ರಾತ್ರಿ ಹಗಲೂ ಅಲ್ಲಿ ಕಾವಲಿದೆ.

**ಖಂ:**—ಹೂಂ! ನಿಜ! ಯಾರೂ ನಿಲ್ಲಬಾರದೆಂದು ಒತ್ತಾಯಿಸಿದರೂ ಸಂಶಯಕ್ಕೆಡೆಯಿದೆ. ಆಗಲಿ, ಇನ್ನು ಕೆಲವೇ ದಿವಸಗಳಲ್ಲವೇ?

**ಸಾ:**—ಇನ್ನೊಂದು ವಿಷಯವಿದೆ.

**ಖಂ:**—ಏನದು?

**ಸಾ:**—ಇಲ್ಲಿಂದ ಬಂದ ಜನರು ನಿಮ್ಮನ್ನು ಬಹಳವಾಗಿ ದೂರುತ್ತಾರೆ.

**ಖಂ:**—ತುಂಟರು! ಅವರನ್ನು ಹಣ್ಣುಮಾಡದಿದ್ದರೆ ರಾಜ್ಯವಿದ್ದೂ ಪ್ರಯೋಜನವಿಲ್ಲ. ಆ ಶಿವಾಜಿಯ ಕಡೆಯವರು ಕಲಿಸಿಕೊಟ್ಟ ಮಾತುಗಳನ್ನು ಹೇಳುವುದು, ಕಂದಾಯ ಕೇಳಿದರೆ! ಅವರಿಗೆ ತಲೆ ತಿರುಗಿದೆ. ಸ್ವಾತಂತ್ರ್ಯವಂತೆ; ಅವರ ಜೀವನೋಪಾಯವನ್ನು

ಸರಕಾರವು ಕಳ್ಳಿಸಿಕೊಡಬೇಕಂತೆ! ಕೆಲಸವಮಾಡಲಿಕ್ಕೆ ಎದೆ ಬಗ್ಗುವುದಿಲ್ಲ!

**ಸಾ:**—ನಿಮ್ಮ ಮಾತು ನಿಜ. ಆದರೆ ನಮ್ಮ "ಮಹಾಯೋಗಿಗಳು" ಮಾತ್ರ ಬಹಳ ಕಳವಳಗೊಂಡಿದ್ದಾರೆ. ಪ್ರಜೆಗಳೆಲ್ಲ ಕಾರಣಾಂತರದಿಂದ ಊರುಬಿಟ್ಟು ಹೋದರೆ ರಾಜ್ಯವಾರಿಗೆನ್ನುತ್ತಾರೆ.

**ಖಂ:**—ರಾಜ್ಯವು ನಮಗೆ!—ಮತ್ತಾರಿಗೆ?—ಆ ಹಳ್ಳಿಜನರಿಗೋ?—ಅವಳ ತಂದೆಯು ಮತ್ತು ಅವಳ ಔದಾರ್ಯದಿಂದ ಖಜಾನೆ ಬರಿದಾಗಿದೆ. ಈಗಲೆ ಹಣವನ್ನು ಕೂಡಿಡದಿದ್ದರೆ ಇನ್ನುಮುಂದೆ ಯುದ್ಧವನ್ನು ಹೂಡುವುದು ಹೇಗಂತೆ?

**ಸಾ:**—ಈ ಎಲ್ಲ ವಿಚಾರಗಳು ಅವರಿಗೆಲ್ಲಿ?-ಎಷ್ಟಾದರೂ ಹೆಂಗುಸಲ್ಲವೇ? ಸ್ವಲ್ಪ ಕರುಣೆ ಹೆಚ್ಚು.

**ಖಂ:**—ಆಗಲಿ,ಮಾವಯ್ಯನವರ ಅಭಿಪ್ರಾಯವೇನು ಈ ವಿಷಯದಲ್ಲಿ?

**ಸಾ:**—ಪಾಪ! ಅವರಿಗೆ ನನ್ನಷ್ಟೂ ಗೊತ್ತಿಲ್ಲ. ನಿಮ್ಮನ್ನು ಕೇಳಿ ವಿಷಯಗಳನ್ನು ತಿಳಿದುಕೊಳ್ಳಬೇಕು; ದೂರಿಡುವವರ ಮಾತುಗಳಿಂದ ಸಿಟ್ಟಾಗಬಾರದು, ಎಂದು ಆಗಾಗ ಹೇಳುತ್ತಾರೆ. ಹೇಗೂ ಸಮಾಧಾನಗೊಳಿಸುತ್ತಾರೆ-

**ಖಂ:**—ಇರಲಿ! ನಾನು ಬಂದಾಗ ಎಲ್ಲ ವಿವರಿಸುತ್ತೇನೆ; ಸರಿಪಡಿಸುತ್ತೇನೆ.

(**ಚಾರನೊಬ್ಬನು ಬಂದು ನೇತಾಜಿಯು ಆಗಮನವನ್ನು ತಿಳಿಸುತ್ತಾನೆ. ಅವನನ್ನು ಒಳಗೆ ಕರೆತರುವಂತೆ ಹೇಳಿ**)

ಅವನೇಕೆ ಇಲ್ಲಿಗೆ ಬಂದನು?—ಪಾಪ! ತಾರೆಯಿಲ್ಲವೆಂದು ಕಳವಳವೇನೋ? (**ನಕ್ಕು**) ಅವನಿಗೀಗ ಇಲ್ಲಿಯ ವರ್ತಮಾನವೇ ಇಲ್ಲವಲ್ಲ!—ಆದರೆ, ನನ್ನಲ್ಲೇನು ಕೆಲಸವವನಿಗೆ?—ಹೂಂ!—ಬರಲಿ! (**ಎದ್ದು ನಿಂತುಕೊಳ್ಳುವನು.**)

(**ನೇತಾಜಿ ಪ್ರವೇಶಿಸಿ ವಂದಿಸಿ ನಿಂತುಕೊಳ್ಳುವನು.**)

**ಖಂ:**—(**ಪ್ರತಿವಂದನೆಯನ್ನು ಮಾಡಿ**)—ಓಹೋ! ಸರದಾರರು! ಅಪೂರ್ವ ಆಗಮನ!

**ನೇ:** - ನಿಜ! ನಿಮ್ಮಲ್ಲಿ ಸಂಭಾಷಿಸುವ ಅವಶ್ಯಕತೆಯಿದ್ದುದರಿಂದ ಬಂದೆನು.

**ಖಂ:**—ಓಹೋ! ಅಂತಹ ಗಹನ ವಿಚಾರವೇನೋ?

**ನೇ:**—ಅದು ಗುಟ್ಟಿನ ವಿಷಯ. (ಸಾವಳ್ಯನ ಕಡೆಗೆ ನೋಡುವನು. ಅವನು ಹೊರಟು ಹೋಗುವಾಗ)

**ಖಂ:**—ಸಾವಳ್ಯ! ನೀನು ಹೊರಟುಹೋಗಬೇಕೆಂದಿಲ್ಲ. ದ್ರೋಹಿಗಳಿದಿರಲ್ಲಿರುವಾಗ ಬೆನ್ನ ಹಿಂದಿರುವ ಮಿತ್ರನನ್ನು ಕಳುಹಿಸುವುದು ಸರಿಯಲ್ಲ. (ನೇತಾಜಿಯನ್ನು ನೋಡಿ)—ಇವನು ನನ್ನ ನಂಬುಗೆಯ ಸೇವಕನು. ಇವನು ಕೇಳಬಾರದ ವಿಚಾರವೇ ಇಲ್ಲ.

**ನೇ:**—ನಾನು ದ್ರೋಹಿಯಲ್ಲ.—ಆದರೂ—

**ಖಂ:** —ಆರಂಭದಲ್ಲಿಯೇ ಮತಭೇದ—ನಮ್ಮ ಸಂಭಾಷಣೆಯಿಂದ ಪ್ರಯೋಜನವೇನೋ?

**ನೇ:**—ಆಗಲಿ, ದ್ರೋಹಿಯೆಂದೇ ತಿಳಿಯಿರಿ. ತಾರೆ ಯಾತ್ರೆಗೆ ಹೋಗಿದ್ದಾಳೆಂದು ವರ್ತಮಾನವಿದೆ! ಇದು ನಿಜವೇ?

**ಖಂ:**—ತಾರೆ! ಹೂಂ, ತಾರೆ ಚಂದ್ರನೊಡನೆ ಇರಬಹುದು!

**ನೇ:**—ನಾನು ಕೇಳಿದುದು ಚಂದ್ರರಾಯರ ಮಗಳು ತಾರೆಯ ವಿಚಾರ—

**ಖಂ:**—ಓಹೋ! ರಾಣೀಸಾಹೇಬರು; ಅವರ ವಿಚಾರ—.

**ನೇ:**—ಅವರು ಯಾತ್ರೆಗೆ ಹೋದ ವರ್ತಮಾನ?

**ಖಂ:**—ನಿಜವಲ್ಲದುದನ್ನು ಜನರೇಕೆ ಆಡುತ್ತಾರೆ?

**ನೇ:**—ಬರಿಯ ವರ್ತಮಾನವಲ್ಲವೇ? ಅದರ ಮೂಲವನ್ನು ಶೋಧಿಸಲಾಗುವುದಿಲ್ಲ. ಅವರೀಗ ಎಲ್ಲಿದ್ದಾರೆ?

**ಖಂ:**—ಅವರೊಡನೆ ಹೋದವರು ಇನ್ನೂ ಹಿಂದೆ ಬರಲಿಲ್ಲ.

**ನೇ:**—ಆಗಲಿ; ಅವರ ಯಾತ್ರಾಕ್ರಮವು ನಿಮಗೆ ತಿಳಿದಿದೆಯಷ್ಟೆ! ಈಗ ಅವರೆಲ್ಲಿರಬಹುದೆಂಬುದೂ ಗೊತ್ತಿಲ್ಲವೆ?

**ಖಂ:**—ಅದಕ್ಕಿಂತ ಪ್ರಾಮುಖ್ಯವಾದ ವಿಚಾರಗಳಲ್ಲಿ ನನ್ನ ದೃಷ್ಟಿಯಿದೆ.

**ನೇ:** —ಅದು ರಾಜ್ಯವಿಚಾರ—ಆದರೆ, ರಾಜ್ಯಾಧಿಕಾರಿಣಿಯ ವಿಷಯವನ್ನೂ ತಿಳಿದುಕೊಳ್ಳುವುದು ಅಷ್ಟೇ ಅವಶ್ಯವಲ್ಲವೇ?

**ಖಂ:**—ಯಾತ್ರೆಗೆ ಯೋಗ್ಯ ವ್ಯವಸ್ಥೆಯನ್ನು ಮೊದಲೆ ಮಾಡಿಯಾಗಿದೆ.

**ನೇ:** –ಆ ವ್ಯವಸ್ಥೆಯಂತೆ ನಡೆಯುತ್ತದೊ ಎಂದಾದರೂ ತಿಳಿದುಕೊಳ್ಳ ಬೇಕಷ್ಟೆ!

**ಖಂ:**—ಹಾಗೆ ನಡೆಯುತ್ತದೆ—ನಡೆಯಲೇ ಬೇಕು. ನನ್ನ ಆಜ್ಞೆ ಯೆಂದರೆ ಅಂತಹುದು.

**ನೇ:**—ನಿಮ್ಮ ವ್ಯವಸ್ಥೆಯಂತೆ, ಅವರೀಗ ಎಲ್ಲಿರಬಹುದು? ಅದನ್ನಾ ದರೂ ಹೇಳಿರಿ.

**ಖಂ:**—ಅದಿರಲಿ, ನಿಮಗೇಕೆ ಅವರ ವಿಚಾರವು?

**ನೇ:**—ಗೆಳತಿಯ ಕ್ಷೇಮಸಮಾಚಾರವನ್ನು ತಿಳಿದುಕೊಳ್ಳುವುದು ಕರ್ತ ವ್ಯವೆಂದು.

**ಖಂ:**—ಓಹೋ! ಬಹಳ ಸದ್ಭಾವನೆ!—ಅವರ ಮೇಲೆ ನಿಮ್ಮ ಕುದೃಷ್ಟಿ ಯಿಲ್ಲವೆಂದು ಕೇಳಿ ಆನಂದವಾಯಿತು!

**ನೇ:**—ಏನು ನಾಯಕರೆ? ನಿಮ್ಮ ಬಾಯಿಂದಲೂ ಇಂತಹ ಮಾತು ಗಳೇ?

**ಖಂ:**—ನಿಜವಾದುದನ್ನು ಆಡುವುದಕ್ಕೆ ಹಿಂಜರಿವುದು ನನ್ನ ಸ್ವಭಾವ ವಲ್ಲ.

**ನೇ:**—ದೋಷಾರೋಪಣೆಯನ್ನು ಮಾಡುವ ಮೊದಲು ವಿಚಾರಿಸ ಬೇಕು.

**ಖಂ:**—ಓಹೋ! ತುಂಬಾ ವಿಚಾರಿಸಿದ್ದೇನೆ. ವಿಚಾರಿಸಿಯೇ ಆಡಿ ದ್ದೇನೆ!

**ನೇ:**—(ಸಿಟ್ಟನ್ನು ಅಡಗಿಸಿ) ಆಗಲಿ, ಅವರು ಯಾವಾಗ ಹಿಂದಿರುಗ ಬಹುದು?

**ಖಂ:**—ಬಂದಾಗ ತಿಳಿಯುತ್ತದೆ.

**ನೇ:**—ಈಗಲೆ ತಿಳಿಯಬಹುದೋ ಎಂದು ನನ್ನ ಪ್ರಶ್ನೆ!

**ಖಂ:**—ಅದನ್ನೀಗ ತಿಳಿಸಲಾರೆನು.

**ನೇ:**—ಹೂಂ–ಇನ್ನೊಂದು ವಿಚಾರ. ನೀವು ಪ್ರಜೆಗಳನ್ನು ಬಹಳ ಪೀಡಿ ಸುವಂತಿದೆ!

**ಖಂ:**— ನಮ್ಮ ಪ್ರಜೆಗಳ ವಿಚಾರವಾದರೂ ನಿಮಗೇಕೋ?

**ನೇ:**—ಪ್ರಜೆಗಳಲ್ಲಿ ಕ್ಷೋಭೆಯನ್ನುಂಟುಮಾಡಿದರೆ ಪರಿಣಾಮವೇನು ಬಲ್ಲಿರಾ?

**ಖಂ:**—ಓಹೋ! ಪರಿಣಾಮವು ಗೊತ್ತಿದೆ; ಸ್ವಾಮಿದ್ರೋಹಿಗಳಿಗೆ, ತುಂಟರಿಗೆ ಸ್ವಲ್ಪ ಆಸ್ಪದವಾಗುತ್ತದೆ.

**ನೇ:**—ನಾಯಕರೇ! ನೀವು ಪ್ರತಿನಿಧಿಯಾಗಿ ಕೆಲಸಮಾಡುವವರು. ಮೊದಲಿದ್ದ ಕ್ರಮಗಳನ್ನು ಬದಲಾಯಿಸುವುದಾಗಲಿ ಹೊಸ ತೆರಿಗೆಯನ್ನು ಹೊರಿಸುವುದಾಗಲಿ ನ್ಯಾಯವಲ್ಲ.

**ಖಂ:**—ನ್ಯಾಯಾನ್ಯಾಯ ವಿಚಾರವನ್ನು ನ್ಯಾಯಬಾಹಿರನಾದ ದ್ರೋಹಿಯಿಂದ ತಿಳಿಯಬೇಕೆಂದಿಲ್ಲ.

**ನೇ:**—ನ್ಯಾಯವೆಂದಾದರೆ ದ್ರೋಹಿಯ ಹೇಳಿಕೆಯಾದರೂ ಅದರ ವರ್ಚಸ್ಸು ಕಡಮೆಯಾಗದು.

**ಖಂ:**— ನಮ್ಮ ಪ್ರಜೆಗಳ ಮೇಲೆ ತೆರಿಗೆಯನ್ನು ಹೊರಿಸುವ ಅಧಿಕಾರವು ನಮ್ಮದು.

**ನೇ:**—ಆದರೆ, ಅದು ಮಿತಿಮೀರಿದರೆ, ಜನರು ಕೊಡಲು ಅಸಮರ್ಥರಾದರೆ-ಪರಿಣಾಮವು ಕ್ರಾಂತಿಯೆಂದು ಬಲ್ಲಿರಾ?

**ಖಂ:**—ಓಹೋ! ಬಂಡಾಯವನ್ನೆಬ್ಬಿಸುವುದಕ್ಕೆ ಈ ಕಡೆಗೆ ತಮ್ಮ ಸವಾರಿಯಾದುದೋ?

**ನೇ:**— ಅದು ತಾನಾಗಿಯೇ ಉಂಟಾಗುತ್ತಿದೆ ಎಂಬುದನ್ನು ತಿಳಿಸಲಿಕ್ಕೆ ಬಂದುದು.

**ಖಂ:**—ದ್ರೋಹಿಯನ್ನು ಇಂದಿನವರೆಗೆ ಕಾರಣಾಂತರಗಳಿಂದ ದಂಡಿಸದಿದ್ದರೂ ಇನ್ನು ಶಿಕ್ಷಿಸುವ ಪ್ರಸಂಗವೊದಗಬಹುದು, ನೆನಪಿರಲಿ!

**ನೇ:**—ಆಗಲಿ! ಆ ನ್ಯಾಯವನ್ನಾದರೂ ಚೆನ್ನಾಗಿ ಅರಿತಿದ್ದೀರಲ್ಲವೆ! ಆದರೆ ನಿಮ್ಮ ಈ ವರ್ತನೆಯಿಂದ ಜಾವಳಿಯ ರಾಜ್ಯವೇ ನಾಶವಾಗುತ್ತದಲ್ಲ ಎಂದು ವ್ಯಸನ.

**ಖಂ:**—ನಿಮ್ಮ ತತ್ವಬೋಧೆಯ ಆವಶ್ಯಕತೆಯಿಲ್ಲ. ನಿಮ್ಮ ಶಿವಾಜಿಯಂತೆ ಕದಿವುದು, ಕೊಲೆಮಾಡಿಸುವುದು ನಮ್ಮ ಉದ್ಯೋಗವಲ್ಲ.

**ನೇ:**—ಅಬ್ಬ! ಮಹಾರಾಜರು ಮಹಾತ್ಮ, ಕಾರುಣ್ಯಮೂರ್ತಿ, ಸದ್ಗುಣದ ಗನಿ ಎಂಬುದನ್ನು ತಿಳಿದೂ ನೀವೂ ಹೀಗೆ ಆಡುವುದೇ? ಅವರ ಮಹೋದ್ದೇಶವನ್ನು ನೀವೂ ವಿರೋಧಿಸುವುದೇ? ಇನ್ನಾದರೂ ನಿಮ್ಮ ಕುಟಿಲೋಪಾಯಗಳನ್ನು ಬಿಟ್ಟು ಮಹಾಕಾರ್ಯಕ್ಕೆ ಕೈಕೊಡಿ, ನಾಯಕರೇ!

**ಖಂ:**—ಏನಿದು? ನಾನೂ ನಿನ್ನಂತೆ ಸ್ವಾಮಿದ್ರೋಹಿಯಾಗಬೇಕೆಂದೇ? ಸ್ವಾರ್ಥಪರರಾದ ಪುಂಡರ ತಂಡವನ್ನು ಕಟ್ಟಿಕೊಂಡು ಮೋಸದಿಂದಲೂ ಬಲಾತ್ಕಾರದಿಂದಲೂ ಕೋಟೆಗಳನ್ನು ವಶಪಡಿಸಿಕೊಂಡು, ಪರದ್ರವ್ಯಾಪಹರಣದಿಂದ ಜೀವಿಸುವ ಆ ಶಿವಾಜಿಗೆ, ಅವನ ಅನುಚರರಿಗೆ, ನಿಮಗೆ, ಸ್ವರಾಜ್ಯದ ಚಿಂತೆಯೇಕೆ? ಪುರಾತನವಾದ ಎಷ್ಟು ಮನೆಗಳನ್ನು ನೆಲಸಮಮಾಡಿದಿರಿ? ಎಷ್ಟು ಶೂರಸರದಾರರನ್ನು ಮೋಸದಿಂದ ಕೊಲ್ಲಿಸಿದಿರಿ? ನಿಮ್ಮ ಕುತಂತ್ರಗಳನ್ನು ಬಿಟ್ಟು ಯಾರಾದರೊಬ್ಬ ಸದ್ವಂಶಸ್ಥನು ಸ್ವರಾಜ್ಯಸ್ಥಾಪನೆಗೆ ಪ್ರಯತ್ನಿಸುವುದಿದ್ದರೆ ಅವನಿಗೆ ಸಹಾಯಮಾಡಿ. ಇದು, ನನ್ನದೊಂದು ಹಿತಸೂಚನೆ.

**ನೇ:**—ಅಂತಹ ರಾಜಮನೆತನವಾದರೂ ಆವುದು? ದೇಶಾಭಿಮಾನಿಗಳಾದ ವೀರನಾಯಕರ ನಿಷ್ಠೆಯನ್ನು ಏಕೀಕರಿಸಲು ಸಮರ್ಥವಾದ ಆ ಮನೆತನವಾವುದು? ಅಂತಹ ವಿಭೂತಿಪುರುಷನಾದರೂ ಆರು?

**ಖಂ:**—(ಸಿಟ್ಟಿನಿಂದ)–ಏಕೆ? ಮೋರೆಯವರ ವಂಶವು ಪುರಾತನವಾದ್ದಲ್ಲವೇ?

**ನೇ:**—ಅದರಲ್ಲಿ ನಮಗೀಗ ತೋರುವವರು ಕೃತಘ್ನರು, ಕರ್ತವ್ಯವಿಮುಖರು!

**ಖಂ:**—ಹಾ! ಜೋಕೆ!—ನಮ್ಮ ರಾಣಿ 'ತಾರೆ' ವೀರನಾರಿಯೆಂಬುದನ್ನು ಮರೆತೆ. ಅವಳನ್ನು ಮುಂದಿಟ್ಟುಕೊಂಡು ಸ್ವರಾಜ್ಯವನ್ನು ಸ್ಥಾಪಿಸಲಿಕ್ಕೆ ನಾವೂ ಪ್ರಯತ್ನಿಸುವೆವು.

**ನೇ:**—ಹಾಗಾದರೆ, ಈಗೇಕೆ ಅವಳನ್ನು ಅಡಗಿಸಿದುದು?

**ಖಂ:**—ಏನು ದರ್ಪ? ಅಡಗಿಸಿದುದೆಂದು ಹೇಳಿದವರಾರು? ಒಂದು ವೇಳೆ ಅಡಗಿಸಿದ್ದರೂ, ನಿನ್ನಂತಹ ದ್ರೋಹಿಗಳ ವಿಶ್ವಾಸಘಾತ ದಿಂದ ಅವಳನ್ನು ಪಾರಾಗಿಸುವುದಕ್ಕೆ!

**ನೇ:**—ಛೇ! ನಿನ್ನಲ್ಲಿ ಮಾತು ಬೆಳೆಯಿಸಿ ಪ್ರಯೋಜನವಿಲ್ಲ.

**ಖಂ:**—ನನ್ನನ್ನು ಹುಡುಕಿಬಂದವನು ನೀನು! ನಮ್ಮ ಮಾತಿನಿಂದ ಪ್ರಯೋಜನವಿಲ್ಲವೆಂದು ನಾನು ಆರಂಭದಲ್ಲಿಯೇ ಹೇಳಿದ್ದೆ.

**ನೇ:**—ಆದರೆ, ಅಂಬಾಭವಾನಿಯನ್ನು ಸಾಕ್ಷಿಯಾಗಿಟ್ಟು, ಈ ಖಡ್ಗ ವನ್ನು ಹಿಡಿದು ಪ್ರತಿಜ್ಞಾಪೂರ್ವಕವಾಗಿ ಹೇಳುತ್ತೇನೆ. "ಮಹಾ ರಾಜರಿಂದಾಗಲಿ, ಅವರ ಪಕ್ಷದವರಿಂದಾಗಲಿ ಯಾವುದೊಂದು ತರದ ದ್ರೋಹವೂ ತಾರೆಗುಂಟಾಗದು. ಅವಳನ್ನು ಶೋಧಿಸಿ ಈ ರಾಜ್ಯದ ಪಟ್ಟಾಭಿಷಿಕ್ತರಾಜ್ಞಿಯನ್ನಾಗಿ ಮಾಡಬೇಕೆಂಬುದೇ ನಮ್ಮ ಮಹಾರಾಜರ ಉದ್ದೇಶವು."

**ಖಂ:**—ಓಹೋ! ಆಗ ನೀನು ರಾಜನಾಗಿ ಮೆರೆಯಬಹುದೆಂದು! ಅಲ್ಲವೆ?

**ನೇ:**—ಛೀ, ಮೂರ್ಖ! ನಿನ್ನ ಕುತಂತ್ರಗಳನ್ನು ಬಯಲಿಗೆಳೆದರೆಯೇ ನಾನು ನೇತಾಜಿ!

**ಖಂ:**—ಏನು? ನನ್ನರಮನೆಯಲ್ಲಿಯೇ ಇಂತಹ ಮಾತುಗಳೇ? ದ್ರೋಹಿ! (ಖಡ್ಗವನ್ನೆಳೆದು ಮುಂದೊತ್ತುವಾಗ ಸಾವಳ್ಯನು ತಡೆಯುತ್ತಾನೆ. ನೇತಾಜಿಯೂ ಖಡ್ಗವನ್ನೆಳೆದು ಹಿಂದೆ ನೋಡುತ್ತಾ ಹೋಗುತ್ತಾನೆ.) ಅಯ್ಯೋ! ಒಂದೇಟಿನಲ್ಲಿ ಅವನನ್ನು ಮುಗಿಸುತ್ತಿದ್ದೆ!–ಸಾವಳ್ಯ! ನೋಡು; ಅವನ ಬೆನ್ನಟ್ಟುವಂತೆ ಕಳುಹಿಸು ರಾವುತರನ್ನು. ನಮ್ಮ ರಾಜ್ಯದ ಗಡಿಯಲ್ಲಿ ತೀರಿಸಿಬಿಡಲಿ ಅವನನ್ನು; ಅಯ್ಯೋ!

**ಸಾ:**—ನಾವು ದುಡುಕಬಾರದು; ಕಾರ್ಯಹಾನಿಯಾದೀತು.

**ಖಂ:**—ಅಬ್ಬ! ಅವನ ಧೈರ್ಯವೇ!–ನಾನು ಅವನ ಹತ್ತಿರ ಮಾತ ನಾಡಬಾರದಿತ್ತು. ಬಂದಾಗ ಸೆರೆಹಿಡಿಯಬೇಕಿತ್ತು. ಸೇವಕ ರಾದರೂ ವೀರಾವೇಶದಿಂದ ಹೋಗುವ ಅವನನ್ನೇಕೆ ಬಿಟ್ಟರೋ? ಕರೆ, ಸಾವಳ್ಯ! ಆ ಬಾಗಿಲುಕಾಯುವವನನ್ನು ಕರೆ!

**ಸಾ:**—ಕಾವಲುಗಾರನೇಕೆ?

**ಖಂ:**—ನೇತಾಜಿಯನ್ನು ಹೊರಟುಹೋಗಲು ಬಿಟ್ಟುದೇಕೆ ಅವನು? ಶತ್ರುವನ್ನು ಸೆರೆಹಿಡಿಯಬೇಕಿತ್ತು ಅವನು. ಹೂಂ-ಕರೆ ಅವನನ್ನು.

**ಸಾ:**—ನಾಯಕರೇ! ನಾವು ದುಡುಕಬಾರದು.

**ಖಂ:**—ದುಡುಕುವುದೇ! ಅಯ್ಯೋ! ಸಾವಳ್ಯ! ನೇತಾಜಿಯಿದ್ದಷ್ಟು ಕಾಲ ನಮಗೆ ಸುಖವಿಲ್ಲ! ಇಲ್ಲವೇ ಇಲ್ಲ!–ಪ್ರಜೆಗಳಿಗೆ, ನಮ್ಮ ಜನರಿಗೆ, ಅವನಲ್ಲಿ ಅಭಿಮಾನ. ಇನ್ನು, ತಾರೆ ಅವನನ್ನು ನೋಡಿದರೆ ತನ್ನ ಪ್ರತಿಜ್ಞೆಯನ್ನೇ ಮರೆಯಬಹುದು.

**ಸಾ:**—ಹೋಗಲಿ; ಹುಲಿಯೊಂದು ಬೋನಿನಲ್ಲಿ ಸಿಕ್ಕಲಿ!–ಆ ಮೇಲೆ ಇವನ ವಿಚಾರ.

**ಖಂ:**—ಅಷ್ಟೆ; ಹೇಗೂ ಹೋದನಲ್ಲ! ಇನ್ನು ಬೆನ್ನುಹಿಡಿದೂ ಪ್ರಯೋಜನವಿಲ್ಲ. ನೀನು ಹೋಗು ಸಾವಳ್ಯ! ಹೋಗು! ನೀನಾದರೂ ಮುಂಜಾಗ್ರತೆಯಿಂದ ಕೆಲಸಮಾಡು. ಅವನೆಲ್ಲಿಯಾದರೂ ಒಬ್ಬಂಟಿಗನಾಗಿ ನಮ್ಮ ನಾಡಿನ ಎಲ್ಲೆಯಲ್ಲಿ ಸಿಕ್ಕಿದರೆ, ಇಗೋ! ಇದೇ ಅನುಜ್ಞೆ; "ಪೆಟ್ಟೊಂದು ತುಂಡೆರಡು" ನಿನ್ನ ಮಾತೇ—

**ಸಾ:**—ಆಯಿತು! ಅಪ್ಪಣೆಯಾಗಲಿ. (ಹೋಗುತ್ತಾನೆ.)

**ಖಂ:**—(ಆತ್ಮಗತ) ಇನ್ನೂ ಎದೆ ಹೊಡೆಯುತ್ತಿದೆ. ಅಬ್ಬ! ಇನ್ನು ತಡ ಮಾಡಬಾರದು. ಆ ಪೋರನಿಗೆ ಸಂದೇಹವುಂಟಾಗಿದೆ. ಅವಳ ಶೋಧವನ್ನಾರಂಭಿಸಬಹುದು.

ಹುಡುಕಲಿ; ಎಲ್ಲಾ ಯಾತ್ರಾಸ್ಥಳಗಳಲ್ಲಿ ಹುಡುಕಲಿ!—(ನಗುತ್ತ) ನನ್ನಿಂದಾಗಿ ಅವನೂ ಯಾತ್ರೆಮಾಡಿ ಪುಣ್ಯಕಟ್ಟಿಕೊಳ್ಳಲಿ.

ಅರಣ್ಯದ ಕಡೆಗೆ ಅವನ ದೃಷ್ಟಿ ಬೀಳುವಂತಿಲ್ಲ. ಬಿದ್ದರೇನು? ಯೋಗಿಗಳ ಪ್ರಭಾವವು ಜನಜನಿತವಾಗಿದೆ. ಅವನಿಂದೇನಾಗುವುದು?

---

## ದೃಶ್ಯ ೫

(ಪುರಂದರಗಡ. ಸುಗುಣನಾಯಕನ ಮನೆ. ಹೈಮವತಿ ಚಿಂತಿಸುತ್ತಾ ಕುಳಿತಿದ್ದಾಳೆ. ಮಾರೋಜಿ ನಿಂತಿದ್ದಾನೆ.)

**ಮಾ:**— ಅಮ್ಮಾ! ಇನ್ನು ಚಿಂತಿಸಿ ಫಲವೇನು? ನೀವೂ ಹೀಗೆ ಧೈರ್ಯಗೆಟ್ಟರೆ!

**ಹೈ:**—ಮಾರೋಜಿ! ನಮ್ಮ ತಂದೆಯವರ ಕಾಲದಿಂದಲೂ ಸ್ವಾಮಿನಿಷ್ಠನಾಗಿದ್ದವನು ನೀನು. ಇಂದು ನಿನ್ನ ಸ್ವಾಮಿಯನ್ನು, ನಮ್ಮ ನೇತಾಜಿಯನ್ನು ಶತ್ರುಗಳ ದವಡೆಯೊಳಗೆ ತುರುಕಿಸಿದೆಯಲ್ಲವೆ?

**ಮಾ:**—ಅಮ್ಮಾ! ನೀವೂ ಹೀಗೆನ್ನುವುದೇ? ಅಯ್ಯೋ, ದೇವರೇ! (ತಲೆಗೆ ಕೈಹಿಡಿದುಕೊಂಡು ಮೌನವಾಗಿ ನಿಲ್ಲುವನು.)

**ಹೈ:**—ಬೇಸರಿಸಬೇಡ ಮಾರೋಜಿ; ನಿನ್ನನ್ನು ಹಳಿದುದಲ್ಲ. ಆ ಪೋರನಲ್ಲಿ ವಿವೇಕವಿಲ್ಲ. ಎಲ್ಲದರಲ್ಲಿಯೂ ಸಾಹಸ! ನೀನಾದರೂ ಬುದ್ಧಿಹೇಳಬೇಕಿತ್ತು.

**ಮಾ:**— ಅಮ್ಮಾ! ಪರಸೇವೆಯೇ ಕಷ್ಟ! ನನ್ನದು ತಪ್ಪಾಯಿತು. ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವೆನು.

**ಹೈ:**—(ಎದ್ದುನಿಂತು) ಮಾರೋಜಿ! ಏನಿದು? ನೋಡು, ನನ್ನ ಮುಖವನ್ನು ನೋಡು.

**ಮಾ:**—ಅಮ್ಮಾ! ನಾನು ತಪ್ಪುಮಾಡಿದವನಲ್ಲವೇ? ನಿಮ್ಮ ಮುಖವನ್ನು ಹೇಗೆ ನೋಡಲಿ?

**ಹೈ:**— ಹೀಗೂ ಇದೆಯೆ? ನಾನೇನೋ ಚಿಂತಾಭರದಲ್ಲಿ ಹೇಳಿದ ಮಾತನ್ನೇ ಮನಸ್ಸಿಗೆ ಹಚ್ಚಿಕೊಳ್ಳುತ್ತೀಯಾ? ಛೀ, ಛೀ! ಆ ಮಾತು ಬಿಡು.

**ಮಾ:**—ಅಮ್ಮಾ ನೀವು ಹೇಳಿದ ಮಾತು ನಿಜ. ಇನ್ನೊಬ್ಬರು ನನ್ನ ತಪ್ಪನ್ನು ತೋರಿಸಿಕೊಟ್ಟಾಗ ಅದನ್ನು ಕಾಣಲಾರದಷ್ಟು ಮೂಢನೆ ನಾನು?

**ಹೈ:**—ನೀನೂ ಅವನ ಜತೆಯಲ್ಲಿ ಹೋಗಬಹುದಿತ್ತು ಎಂದು ನನಗೆ ಹೊಳೆಯಿತು. ಏನೋ ಹೇಳಿಬಿಟ್ಟೆ; ಅದನ್ನು ಮರೆತುಬಿಡು.

**ಮಾ:**—ರಾಯರು ನನ್ನ ಮಾತನ್ನು ಕೇಳಲಿಲ್ಲವಮ್ಮಾ! ಎಷ್ಟೋ ಹೇಳಿಕೊಂಡೆ! "ನೀನು ಹೇಳಿದಷ್ಟು ಕೆಲಸವನ್ನು ಮಾಡೆ"ಂದು ಗದರಿಸಿದರಮ್ಮಾ!

**ಹೈ:**—ಅಹುದು! ಅವನ ಚಲವು ನನಗೆ ಗೊತ್ತಿಲ್ಲದುದೇ?

**ಮಾ:**—ತಮ್ಮ ವಿಚಾರವನ್ನು ನಿಮಗೆ ಕೂಡಲೆ ತಿಳಿಸಬೇಕೆಂದು ಕಟ್ಟಪ್ಪಣೆ ಮಾಡಿದರು. ನಾನು ಈ ಕಡೆ ಬರಬೇಕಾಯಿತು.—ಇಲ್ಲದಿದ್ದರೆ ಅವರನ್ನು ಅನುಸರಿಸುತ್ತಿದ್ದೆನು.

**ಹೈ:**—ಅದು ಅವನ ಸ್ವಭಾವ. ವಿಚಾರವಿಲ್ಲ; ಮುಂದಾಲೋಚನೆಯಿಲ್ಲ.

**ಮಾ:**—ಆಗಲಿ; ಒಬ್ಬರೇ ಹೋಗಿದ್ದರೂ ಭಯವಿಲ್ಲವಮ್ಮಾ. ಅಲ್ಲಿ ಅವರನ್ನಾರೂ ಗುರುತಿಸುವಂತಿಲ್ಲ.

**ಹೈ:**—(ನಕ್ಕು) ನನ್ನ ಸಮಾಧಾನಕ್ಕೋಸ್ಕರ ಹೇಳುವ ಮಾತುಗಳಲ್ಲವೇ ಇವು?-ತಾರೆ ಅಥವಾ ಖಂಡೋಜಿ ಅಲ್ಲಿದ್ದರೆ ಅವನನ್ನು ನಿಜವಾಗಿಯೂ ಗುರುತಿಸುವರು.

**ಮಾ:**—ಅಲ್ಲಮ್ಮಾ! ವೇಷಪಲ್ಲಟದಲ್ಲಿ ಅವರಿಗಿರುವ ಚಾತುರ್ಯವನ್ನು ನೀವು ತಿಳಿದಿಲ್ಲ. ಬಡ ಹಳ್ಳಿಯವನಂತೆ ವೇಷಧರಿಸಿ ನನ್ನ ಮನೆಯಿಂದ ಹೊರಟಾಗ ನಾನೇ ಅವರನ್ನು ಗುರುತಿಸಲಿಲ್ಲ, ಅಮ್ಮಾ!

**ಹೈ:**—ಹೂಂ! ಬಂದುದನ್ನು ಅನುಭವಿಸಬೇಕು. ನೋಡುವ, ಬಂದಾನು, ನಾಳೆ ಸಂಜೆಯೊಳಗೆ!

**ಮಾ:**—ನಾಳೆ ಹೊತ್ತೇರಿ ಒಂದು ಜಾವದೊಳಗೆಯೇ ಬರುವರಮ್ಮಾ! ಅವರ ಕಂಕುವನ್ನು ನಮ್ಮ ಸಂಕೇತಸ್ಥಾನದಲ್ಲಿ ನಿಲ್ಲಿಸಿದ್ದೇನೆ.

**ಹೈ:**—ಆಗಲಿ; ನೀನೂ ಹೋಗಿ ವಿಶ್ರಮಿಸು. (ನಮಸ್ಕರಿಸಿ ಅವನು ಹೋಗುತ್ತಾನೆ.) (ಆತ್ಮಗತ) ಅವರೂ ಹೋಗಿದ್ದಾರಲ್ಲ ಶೋಧನೆಗೆಂದು. ಗುಪ್ತಚರರೂ ಸಮೀಪದಲ್ಲಿಯೇ ತಿರುಗುತ್ತಿದ್ದಾರೆ. ಹಾಗೆ ಭಯವೇನು?

---

## ದೃಶ್ಯ ೬

(ಜಾವಳಿಯ ಅರಣ್ಯಮಧ್ಯದಲ್ಲಿ ಆಶ್ರಮ.
ರಘುನಾಥರಾಯನು ಯೋಗಿಯಂತೆ ಯಜ್ಞಕುಂಡದಿದಿರಲ್ಲಿ ಕುಳಿತಿದ್ದಾನೆ.
ಆಗ ಸೇವಕನೊಬ್ಬನೂ ಹಳ್ಳಿಯವನೊಬ್ಬನೂ (ನೇತಾಜಿ) ಬಂದು ನಮಸ್ಕರಿಸುತ್ತಾರೆ.)

**ಸೇವಕ:**—ಮಹಾರಾಜ! ಎಷ್ಟು ತಡೆದರೂ ಇವನು ಕೇಳುವುದಿಲ್ಲ. ಮನೆಯಲ್ಲೇನೋ ಆಪತ್ತಂತೆ. ಮಹಾಸ್ವಾಮಿಗಳನ್ನು ನೋಡಲೇ ಬೇಕಂತೆ.

**ರ:**—ಈ ಸಮಯದಲ್ಲಿ? ಇದು ಅಕಾಲವೆನ್ನಲಿಲ್ಲವೇ? ಹೇಳು-ಸ್ವಾಮಿಯವರು ಸಮಾಧಿಯಲ್ಲಿದ್ದಾರೆಂದು ಹೇಳು.

**ನೇ:**—ಹೇಳಿದರೂ ಅವನ ಗೋಳೇ ಗೋಳು. ಅವನ ಹೆಂಡತಿಯನ್ನೂ ಮಗನನ್ನೂ ಉಳಿಸಿ ಪುಣ್ಯಕಟ್ಟಿಕೊಳ್ಳಬೇಕಂತೆ.

**ರ:**—ಯಾವಾಗಲೂ ಇದೇ ಅವಸ್ಥೆ. ಸ್ವಾಮಿಯವರ ಸಮಾಧಿಯಿಳಿವಾಗ ಒಂದು ಜಾವ ರಾತ್ರಿಯಾಗಬಹುದು. ಅವನನ್ನೀಗ ಗುಡಿಸಿಲಿಗೆ ಕರೆದುಕೊಂಡು ಹೋಗು.

**ನೇತಾಜಿ:**—(ಹಳ್ಳಿಯವನು)—ನನ್ನೊಡೆಯ! (ಅಡ್ಡಬಿದ್ದು) ದರಿದ್ರ ಸ್ವಾಮಿ! ನನ್ನನ್ನು ಕಾಪಾಡಬೇಕು.

**ರ:**—ಏಃ ಈ ಅಕಾಲದಲ್ಲೇಕೆ ಬಂದೆಯೋ?

**ನೇ:**—ದೇವರೆ! ನನ್ನೂರು ಬಹಳ ದೂರದಲ್ಲಿದೆ. ಅಲ್ಲಿಂದ ಹೊತ್ತು ಅಷ್ಟೇರುವಾಗ ಹೊರಟೆ. ಆದರೂ ಇಲ್ಲಿ ಬರುವಾಗ ಕತ್ತಲೆಯಾಯಿತು ಸ್ವಾಮಿ!

**ರ:**—ಎಲ್ಲಿಯವನೋ ನೀನು?

**ನೇ:**—ನಾನು ಕರ್ನಾಡದವ ಸ್ವಾಮಿ! ಸುಮಾರು ಹತ್ತು ಹರದಾರಿ ದೂರವಿದೆ.

**ರ:**—ಆಪತ್ತೇನೋ?

**ನೇ:**—ನನ್ನಾಕೆಗೆ ಏನೋ ಜ್ವರವಂತೆ—ಬೋಧವಿಲ್ಲ ಸ್ವಾಮಿ!

**ರ:**—ಜ್ವರಕ್ಕೆ ತಕ್ಕುದಾದ ಔಷಧವನ್ನು ಮಾಡದೆ ಇಲ್ಲಿಗೇಕೆ ಬಂದೆ?

**ನೇ:**—ಅಯ್ಯೋ! ಎಲ್ಲಾ ಆಯಿತು ಸ್ವಾಮಿ! ಇಪ್ಪತ್ತು ದಿವಸವಾಯಿತು. ಇನ್ನು ಮದ್ದಿನಿಂದ ಗುಣವಾಗುತ್ತದೆಲ್ಲಿ?—ಮಗನಿಗೆ ಹುಚ್ಚು!

**ರ:**—ಜ್ವರ, ಹುಚ್ಚು! ಇದೇನು ಔಷಧಶಾಲೆಯೇ?

**ನೇ:**—ಅಲ್ಲ, ಸ್ವಾಮಿ! ನನಗೆ ಸ್ವಲ್ಪ ಭಸ್ಮವನ್ನು ಕರುಣಿಸಬೇಕು.

**ರ:**—(ನಕ್ಕು) ರೋಗಕ್ಕೆ ತಕ್ಕ ಮದ್ದುಮಾಡು.

**ನೇ:**—ಎಂತಹ ಮದ್ದು ಸ್ವಾಮಿ! ಮದ್ದಿನಿಂದ ಗುಣವಾಗುವ ರೋಗವಾಗಿದ್ದರೆ ಎಂದೋ ಆಗುತ್ತಿತ್ತು. ನನ್ನಲ್ಲಿ ದಯೆಯಿಡಬೇಕು, ದೇವರೆ! ಸ್ವಾಮಿಗಳ ಭೇಟಿಮಾಡಿಸಬೇಕು, ನನ್ನೊಡೆಯ.

**ರ:**—ಸರಿ! ಈ ರಾತ್ರಿ ಗುಡಿಸಿಲಲ್ಲಿ ಉಳುಕೊ. ನಾಳೆ ಮುಂಜಾನೆ ಸ್ವಾಮಿಗಳ ದರ್ಶನವಾಗುವುದು.

**ನೇ:**—ಹೂಂ; ಅಯ್ಯೋ! ನನಗೆ ಪುಣ್ಯಬೇಕಲ್ಲಾ! ಅದೇ ಹೀಗಾಗುವುದು. (ಅಡ್ಡಬಿದ್ದು ಅಳುತ್ತಾನೆ.)

**ರ:**—ಎಂತಹ ಪೀಡೆಯಿದು! ಏ! ನಾನೇ ಭಸ್ಮವನ್ನು ಕೊಡುತ್ತೇನೆ.

**ನೇ:**—(ಅಳುತ್ತಾ) ನನ್ನ ಗ್ರಹಚಾರ. ಯಾರನ್ನು ದೂರುವುದೇಕೆ?

**ರ:**—(ಭಸ್ಮವನ್ನು ಹಿಡಿದುಕೊಂಡು) ಏನೋ ಇದು? ಭಸ್ಮವನ್ನೂ ತೆಗೆದುಕೊಳ್ಳುವುದಿಲ್ಲ! ನೀನೊಂದು ವಿಚಿತ್ರ ಪ್ರಾಣಿ!

**ನೇ:**—ಹೌದು ದೇವರು! ಮೊನ್ನೆಯಾದುದು ವಿಚಿತ್ರ. ಅಲ್ಲ, ಅವಳು ಸತ್ತುಹೋದಳೆಂದು ನಾವು ಮರಕಡಿಯಲಿಕ್ಕೆ ಹೋಗಿದ್ದೆವು.

**ರ:**—ಏ! ಏನು ಹುಚ್ಚು ಮಾತಾಡುತ್ತೀಯೋ?

**ನೇ:**—ಹುಚ್ಚೋ, ಏನೋ, ಯಾರು ಬಲ್ಲ? ಇಲ್ಲಿ ಸ್ವಾಮಿಗಳು ಪ್ರಸಾದ ಕೊಟ್ಟ ಸಮಯ; ಅಲ್ಲಿ ಅವಳು ಎದ್ದು ಕುಳಿತುಕೊಂಡಳು. ನಮ್ಮ ಸೋಮ್ಯ ಬಂದವ ಹೇಳಿದಾಗ ನಮಗೆ ಗೊತ್ತಾಯಿತು.

**ರ:**—ಎಂತಹ ವಿಚಾರವೋ ಇದು?

**ನೇ:**—ಹೌದು ಬುದ್ಧೀ! ನಮ್ಮ ಸೋಮ್ಯ ಬಂದಿದ್ದ ಮೊನ್ನೆ. ಅವನ ಹೆಂಡತಿ ಸತ್ತು ಹುಟ್ಟಿದ್ದು ಸ್ವಾಮಿ!

**ರ:**— ಹೇಗೋ? ಭಸ್ಮದ ಪ್ರಭಾವದಿಂದಲೋ?

**ನೇ:**— ಅದೇ ಭಸ್ಮ! ನನಗೂ ಕರುಣಿಸಬೇಕು, ಬುದ್ಧೀ!

**ರ:**—(ಆತ್ಮಗತ) ಇವನು ಶುದ್ಧ ತಿಳಿಗೇಡಿ. ಇವನ ಕತೆಯೇ ಇವನಿಗೆ. (ಪ್ರಕಾಶ)—ಹೇ! ನಿನಗೇನಾಗಬೇಕು?

**ನೇ:**— ಮಹಾಸ್ವಾಮಿಗಳ ಪ್ರಸಾದ, ಆಶೀರ್ವಾದ. ನನ್ನ ಹೆಂಡತಿಯನ್ನು ಜ್ವರದಿಂದ ಎದ್ದೇಳು ಎಂದು ಅವರು ಹೇಳಿದರೆ ಅವಳು ಕೂತುಕೊಂಡಾಳು. ನನಗೆ ಭರವಸೆಯಿಲ್ಲವೆ?–ಸ್ವಾಮಿ! ನನ್ನ ಮಗನ ಹುಚ್ಚು ಬಿಡಲಿ. ಅವನನ್ನು ನಿಮ್ಮ ಸೇವೆಗೆ ಇಲ್ಲಿಯೇ ಬಿಡುವೆನು.

**ರ:**—ನೀನು ಸುಮ್ಮನೆ ಕಾಯುವುದೆಷ್ಟು? ಇಗೋ! ಈ ಭಸ್ಮ ಅವರು ಮೊದಲೇ ಮಂತ್ರಿಸಿದುದು. ಅವರೇಳುವಾಗ ಬಹಳ ರಾತ್ರಿಯಾಗಬಹುದು. ಇದನ್ನು ತೆಗೆದುಕೊಂಡು ಹೋಗು.

**ನೇ:**— ಅಯ್ಯೋ! ನನ್ನ ಕೆಲಸವು ಆಗಬೇಕಲ್ಲ? ನಾನು ಕಾಯುತ್ತೇನೆ ಸ್ವಾಮಿ; ಅವರ ಬಾಯಿಂದ ಒಂದು ಮಾತು ಹೇಳಿಸಬೇಕು, ಬುದ್ಧೀ!

**ರ:**—ಹೂಂ! ಅಲ್ಲಿ ಬಿದ್ದಿರು. ಸಮಾಧಿಯಿಳಿದ ಮೇಲೆ ಸ್ವಾಮಿಗಳು ಹೊರಗೆ ಬರುವರು; ಆಗ ನಿನ್ನ ಸಂಕಷ್ಟವನ್ನರಿಕೆಮಾಡು.

**ನೇ:** –(ಅಡ್ಡಬಿದ್ದು) ನನ್ನೊಡೆಯ, ಬಡವನನ್ನು ಬದುಕಿಸಿದಿರಿ!

**ಸೇವಕ:**— ಇವನಿಲ್ಲಿಯೇ ಇರುವುದೇ?

**ರ:**— ಇರಲಿ; ದೋಷವೇನು? ನಾಯಕರು ಬಂದರೆ ಅವರನ್ನು ಕರೆದುಕೊಂಡು ಬಾ.

**ಸೇವಕ:**—ಅವರು ಆಗಲೆ ಬಂದಿದ್ದಾರೆ, ಬುದ್ಧೀ! ಸುರಂಗಗಳಲ್ಲಿ ತಿರುಗಾಡುತ್ತಿದ್ದಾರೆ; ಈಗಲೆ ಬರಬಹುದು ಇಲ್ಲಿಗೆ!

**ರ:**— ಹೂಂ! ನೀನು ಹೋಗು. (ಅವನು ನಮಸ್ಕರಿಸಿ ಹೋಗುತ್ತಾನೆ.) (ನೇತಾಜಿಯನ್ನು ನೋಡಿ) ನೀನು ಅಲ್ಲಿಯೇ ಮಲಗಿರು. ಕತ್ತಲೆಯಲ್ಲಿ ಅತ್ತಿತ್ತ ಹೋಗಬೇಡ.

**ನೇ:**— ಬುದ್ಧೀ, ಅಪ್ಪಣೆ. (ರಘುನಾಥರಾಯನು ಹೊರಟುಹೋಗುತ್ತಾನೆ.) (ಆತ್ಮಗತ)–ಇದೇನೋ ಗಹನವಿಚಾರ. ಖಂಡೋಜಿ ನಾಯಕ ನಿದ್ದಾನೆ; ಸೈನಿಕರಿದ್ದಾರೆ; ಅವನಾಳುಗಳಿದ್ದಾರೆ; ಸುರಂಗವಿದೆ. ಇವರೆ ರಘುನಾಥರಾಯರಲ್ಲವೇ? ಏನೋ ಕಪಟಾಚರಣೆಯಿದೆ; ಸಂದೇಹವಿಲ್ಲ. ಆದರೆ, ಏನಿರಬಹುದು? ಗುಟ್ಟನ್ನು ತಿಳಿವುದೆಂತು? (ಖಂಡೋಜಿಯೂ ಸಾವಳ್ಯನೂ ಮಾತನಾಡುತ್ತಾ ಬರುತ್ತಾರೆ. ನೇತಾಜಿ ಅಲ್ಲಿಯೇ ಮಲಗಿಕೊಳ್ಳುತ್ತಾನೆ.)

**ಖಂ.**—ಸಾವಳ್ಯ! ಎಷ್ಟು ಚೆನ್ನಾಗಿದೆ, ನಿನ್ನ ಕೆಲಸ? ನಿನ್ನನ್ನೆಷ್ಟು ಹೊಗಳಿದರೂ ಸಾಲದು. ಇನ್ನು ಮಾತ್ರ ನಮ್ಮ ಆಳುಗಳನ್ನು ಸುರಂಗದೊಳಗೆ ಇಳಿಸಬಾರದು. ನಂಬುಗೆಯುವರಾದ ಒಬ್ಬಿಬ್ಬರನ್ನು ಮಾತ್ರ ಒಳಗೆ ಕಳುಹಿಸಬೇಕು.

**ಸಾ:**—ಗುಟ್ಟು ಬಯಲಾಗುವ ಭಯವಿಲ್ಲ. ಆದರೂ ಎರಡುಮೂರು ಆಳುಗಳನ್ನು ಇಟ್ಟುಕೊಂಡು ಬೇರೆಯುವರನ್ನು ಊರಿಗೆ ಕಳುಹಿಸಿಬಿಡುವ.

**ಖಂ:** —ಛೇ, ಛೇ! ಇಲ್ಲಿಯ ಕೆಲಸವು ತೀರುವ ವರೆಗೆ ಹಾಗೆ ಮಾಡಬಾರದು. ಅವರೆಲ್ಲರೂ ಇಲ್ಲಿಯೇ ಇರಬೇಕು.

**ಸಾ:**—ಕೆಲಸವಿಲ್ಲದೆ ಅವರಿಲ್ಲಿರುವುದು ಅಪಾಯಕರ.

**ಖಂ:**—ಅದಕ್ಕೋಸ್ಕರವೇ ಅವರಿಗೆ ಕೆಲಸವನ್ನು ನಿಶ್ಚಯಿಸಿದ್ದೇನೆ. ನಮ್ಮ ಕೋಟೆಯಿಂದ ಈ ಪವಿತ್ರಸ್ಥಾನಕ್ಕೆ ಬರುವುದಕ್ಕೆ ರಸ್ತೆ ಕಡಿಯಬೇಕೆಂದು ಹೇಳು. ಅಲ್ಲಲ್ಲಿ ಮರವನ್ನು ಕಡಿಯುತ್ತಾ ಇರಲಿ.

**ಸಾ:**—ಅಪ್ಪಣೆ.

**ಖಂ:**—ಏನು? ಇಬ್ಬರೂ ಒಳಗಿದ್ದಾರೋ?

**ಸಾ:**—ಮತ್ತೇನು? ಫಲಾಹಾರವನ್ನು ಮಾಡುತ್ತಿರಬಹುದು; ನೀವೇ ಒಳಗೆ ಹೋಗಬಹುದಲ್ಲ?

**ಖಂ:**—ಹೂಂ! ಆಗಲಿ, ನಾನು ಬೇಗನೇ ಬರುತ್ತೇನೆ. ನೀನು ನಮ್ಮ ಜನರಿದ್ದಲ್ಲಿಗೆ ಹೋಗು. ಅವರಿಗೇನಾದರೂ ಸಂದೇಹಕ್ಕೆಡೆ

ಬೇಡ! (ಒಳಗೆ ಹೋಗುತ್ತಾನೆ. ಸಾವಳ್ಯನೂ ಹೊರಟುಹೋಗು ತ್ತಾನೆ.)

**ನೇ:**—(ಆತ್ಮಗತ) ಓಹೋಃ ಗುಟ್ಟೆಲ್ಲ ತಿಳಿಯಿತು. ಯೋಗಿಗಳಿಬ್ಬರೂ ನನ್ನ ಊಹೆಯಂತೆಯೇ!—ಆದರೆ, ಸುರಂಗವೇಕೆ? (ಆಲೋಚಿಸುತ್ತಾ, ಒಳಗಿನಿಂದ ಮಾತನಾಡುವ ಸದ್ದು ಕೇಳಿ) ಹಾ! ಒಳಗಿನಿಂದ ಮಾತು ಕೇಳುತ್ತದೆ. (ಬಾಗಿಲ ಬಳಿ ಹೋಗಿ ಕಿವಿಗೊಟ್ಟು ಕೇಳುತ್ತಾ) ಆಹಾ! ಕೆಲಸವೆಲ್ಲ ತೀರಿತೇ?–ಏನು? ರಾಜರನ್ನು ಆಮಂತ್ರಿಸುವುದೇ? ಇಲ್ಲಿಗೆ?–ಊಹೂ! ದೊಡ್ಡ ಸಾಧುಗಳೇ ಹೋಗುವುದು.–ನಿಜ, ನಿಜ! ಮಹಾರಾಜರು ನಿಸ್ಸಂಶಯವಾಗಿ ಬರುವರು. ಸಾಧುಗಳಲ್ಲಿ ಅವರಿಗಿರುವ ಅಭಿಮಾನವೇ ಅಂತಹುದು. ಬಂದರೆ ತೀರಿತು; ಏನು? ಎಂತಹ ದುಷ್ಟರಿವರು?–ಹೇ, ದೇವಿ! ಏನಿದು? ಕುಹಕಿಗಳು ಬಲೆಯನ್ನು ಇಷ್ಟು ದೂರ ಬೀಸುವವರೆಗೂ ನಮ್ಮ ಕಣ್ಣು ತೆರೆಯಲಿಲ್ಲವೇ? ಗುಪ್ತಚರರಿದ್ದೇನು? ಅಯ್ಯೋ, ಇವರೇಕೆ ಇಷ್ಟು ಮೆಲ್ಲಗೆ ಮಾತನಾಡುವುದು? ಇವರ ದುರುದ್ದೇಶವೇನೋ? ಸುರಂಗವೇಕಪ್ಪಾ? (ಮತ್ತೂ ಸಮೀಪಕ್ಕೆ ಹೋಗಿ ಕೇಳಲಿಕ್ಕೆ ಪ್ರಯತ್ನಿಸುತ್ತಾ) ಅಯ್ಯೋ, ಗುಣುಗುಟ್ಟುವುದೇ? ನಾನು ಒಳಗೆ ಹೋದರೇನು? ಅವರು ಮೂವರು, ನಾನೊಬ್ಬ! ಪ್ರಯೋಜನವೇನು? (ಸ್ವಲ್ಪ ಸಮಯ ಅಲ್ಲಿಯೇ ನಿಂತು)—ದುಷ್ಟರಲ್ಲವೇ? ದುಷ್ಕೃತ್ಯಗಳ ವಿಷಯ ಮಾತನಾಡುವಾಗ ಕಂಠಸ್ವರವು ಇಳಿದುಹೋಗುವುದು ಸಹಜವೇ!–ಅಯ್ಯೋ!

(ತಾನು ಮೊದಲು ಮಲಗಿದ್ದ ಸ್ಥಳಕ್ಕೆ ಬಂದು ಕುಳಿತು),—ರಾಜರನ್ನು ಆಮಂತ್ರಿಸುವುದು, ಅವರನ್ನು ಮೋಸಗೊಳಿಸುವುದು; ಸರಿ!–ಹೇಗೆಂಬುದು ತಿಳಿಯಲಿಲ್ಲ; ಹೇಗೆ?–(ವಿಚಾರಮಗ್ನನಾಗಿ ಕುಳಿತುಕೊಳ್ಳುತ್ತಾನೆ.)

(ಖಂಡೋಜಿಯೂ ರಘುನಾಥರಾಯನೂ ಹೊರಗೆ ಬರುತ್ತಾರೆ. ಖಂಡೋಜಿ ಮೂಲೆಯಲ್ಲಿದ್ದ ನೇತಾಜಿಯನ್ನು ನೋಡಿ)

**ಖಂ:**—ಯಾರಿವನು? ಎಲೇ, ಯಾರು?

**ನೇ:**—ನಾನು; ಬುದ್ಧೀ! ನನ್ನ ಹೆಂಡತಿ, ಮಗ, ಬುದ್ಧೀ!

**ರ:**—ಅವನಿಗೇನೋ ಭಸ್ಮ ಬೇಕಂತೆ. ಮಹಾಸ್ವಾಮಿಗಳ ಆಶೀರ್ವಾದ ಬೇಕಂತೆ.

**ನೇ:**—ಏನಿದ್ದರೂ ಈ ಅಪರರಾತ್ರಿಯಲ್ಲಿ ಅವನಿಲ್ಲೇಕೆ ಬಂದಿದ್ದಾನೆ? ಕಳ್ಳ, ಹಿಡಿಯಿರವನನ್ನು! ಯಾರಲ್ಲಿ?

**ರ:**—ಛೀ! ಬೇಡ; ಅವನನ್ನಲ್ಲಿ ಕುಳ್ಳಿರಿಸಿದುದೇ ನಾನು. ಸ್ವಾಮಿಗಳು ಸಮಾಧಿಯಲ್ಲಿದ್ದಾಗ ಅವನು ಬಂದನು. ಸಮಾಧಿಯಿಳಿದ ಮೇಲೆ ಪ್ರಸಾದ ಕೊಡಿಸುತ್ತೇನೆಂದೆ.

**ಖಂ:**—ಏನು ಮಾವ? ಇಂತಹ ಅಚಾತುರ್ಯವೇ? ಇನ್ನು ಅವನು ರಾತ್ರಿಯಲ್ಲಿ ಉಳಿವುದೆಲ್ಲಿ?

**ರ:**—ದರ್ಶನವಾದ ಮೇಲೆ ಅವನನ್ನು ಕಳುಹಿದರಾಯಿತು. (ತಾರೆ ಹೊರಗೆ ಬರುತ್ತಾಳೆ) ಹ! ಸ್ವಾಮಿಗಳೆ ಬಂದರಷ್ಟೆ!—ಮಹಾರಾಜ! ಇವನಲ್ಲೇನೋ ಆಪತ್ತಂತೆ.

**ತಾ:**—(ಹೀಗೆ ಆಲೋಚಿಸಿ) ಅಸ್ವಸ್ಥತೆಯಲ್ಲವೇ?

**ನೇ:**—(ಅಡ್ಡಬಿದ್ದು)— ಅಪ್ಪಣೆಯಾದುದು ಸರಿ! ಬದುಕಿಸಬೇಕು; ದೇವರು, ಆಶೀರ್ವದಿಸಬೇಕು.

**ರ:**—ಭಸ್ಮವನ್ನು ತೆಗೆದಿಟ್ಟಿದ್ದೇನೆ; ಅದನ್ನು ಅವನಿಗೆ ಅನುಗ್ರಹಿಸಬೇಕು.

**ತಾ:**—(ಅದನ್ನು ತೆಗೆದುಕೊಂಡು ಕಣ್ಣುಮುಚ್ಚಿ ಧ್ಯಾನಿಸಿ) ಇಗೋ, ಜಗದಂಬೆ ರಕ್ಷಿಸುವಳು!

**ರ:**—(ಅದನ್ನು ತೆಗೆದುಕೊಂಡು ನಮಸ್ಕರಿಸಿ ಎದ್ದು) ನಿಮ್ಮ ದಯೆ.

**ತಾ:**—ಭಕ್ತಿವಿಶ್ವಾಸಗಳಿರಲಿ; ಆರೋಗ್ಯವಾಗುತ್ತದೆ.

**ರ:**—ಹೂಂ! ಇನ್ನು ನೀನು ಹೊರಡು; ಜನರುಳುಕೊಳ್ಳುವ ಸತ್ರವಿದೆಯಲ್ಲಿ; ಅಲ್ಲಿಗೆ ಹೋಗು. ಜೋಕೆ! ಅತ್ತಿತ್ತ ಹೋಗಬೇಡ.

**ನೇ:**—ಒಡೆಯ! ನಾನೆಲ್ಲಿ ಹೋಗಲಿ? ಇಲ್ಲಿಯೇ ಬಿದ್ದಿರುತ್ತೇನೆ. ಮುಂಜಾನೆ ಹೊರಟು ಹೋಗುತ್ತೇನೆ ಸ್ವಾಮೀ!

**ತಾ:**—ಇರಲಿ! ಒಂದು ಮೂಲೆಯಲ್ಲಿ ಬಿದ್ದಿರುತ್ತಾನೆ.

**ಖಂ:**—ಆಹಾ! ಹಾ! ನಿಮ್ಮ ಕಾರುಣ್ಯದಿಂದ ಕೆಲಸವು ಕೆಡುತ್ತದೆ. (ನೇತಾಜಿಯನ್ನು ನೋಡಿ) ಹೋಗೋ ಇಲ್ಲಿಂದ! ರಾತ್ರಿಯಲ್ಲಿಯೂ ಸ್ವಲ್ಪವಿಶ್ರಾಂತಿಯಿಲ್ಲ. ನಿಮಗೆಲ್ಲ ಸೌಕರ್ಯಗಳನ್ನೊದಗಿಸಿದ್ದರೂ ಇಲ್ಲಿ ನಿಮ್ಮ ಕಾಟ ತಪ್ಪುವುದಿಲ್ಲ. ಹೂಂ, ಹೊರಟುಹೋಗು.

**ನೇ:**—ಇಲ್ಲ ಬುದ್ಧೀ! ನನ್ನ ಕೆಲಸವಾಯಿತು. ಪ್ರಸಾದ ಸಿಕ್ಕಿತು; ಆಶೀರ್ವಾದವಾಯಿತು. ಇನ್ನು ನನಗೇನು ಬೇಕು? ನಾನು ಇಲ್ಲಿಯೇ ಸ್ವಲ್ಪ ಒರಗುತ್ತೇನೆ. ಮಹಾರಾಜರಿಗೆ ಇನ್ನು ಉಪ ದ್ರವವಾಗಲಿಕ್ಕಿಲ್ಲ ಬುದ್ಧೀ!

**ಖಂ:**—ಹೂಂ! ಹೋಗು!—ಏಳು!—ರಾತ್ರಿಯಲ್ಲಿ ಈ ಭಿಕಾರಿಯನ್ನು ಬರಗೊಡಿಸಿದುದೇ ತಪ್ಪು.

**ರ:**— ಹೋಗುತ್ತೀಯೋ, ಇಲ್ಲಿಂದ ದೂಡಬೇಕೋ?

**ನೇ:**—ದೇವರೇ? ಈ ಕತ್ತಲಲ್ಲಿ ಎಲ್ಲಿಗೆ ಹೋಗಲಿ ಬುದ್ಧೀ!

**ಖಂ:**—ಏ! ಹಟಮಾರಿ! (ಸಿಳ್ಳು ಹಾಕುತ್ತಾನೆ, ಇಬ್ಬರು ಸೇವಕರು ಬರುತ್ತಾರೆ.) ಎಳೆದುಕೊಂಡು ಹೋಗಿ ಇವನನ್ನು, ಅರಣ್ಯದ ಹೊರಕ್ಕೆ ದೂಡಿ ಬನ್ನಿ.

**ನೇ:**—ಅಯ್ಯೋ, ದೂಡುವುದೇಕೆ ನನ್ನನ್ನು! ನಾನೇ ಹೋಗುತ್ತೇನೆ. ಕತ್ತಲಲ್ಲಿ ನನಗೆಯೇ ಈ ಕಾಡಿನಲ್ಲಿ ದಾರಿಸಿಕ್ಕಲಿಕ್ಕಿಲ್ಲವೆಂದು ಹೆದರಿದೆ. ಇವರು ಬಂದುದು ಬಹಳ ಉಪಕಾರವಾಯಿತು. ನಾನು ರಾತ್ರಿಯೇ ಊರಿಗೆ ಪ್ರಯಾಣ ಮಾಡುತ್ತೇನೆ.

**ಖಂ:**—ನೋಡುವುದೇನು? ಇವನನ್ನು ಅನ್ನಸತ್ರದಲ್ಲಿ ಮಾಡಿ ಬನ್ನಿ.

**ನೇ:**—ಬುದ್ಧೀ! ಈ ಕಾಡಿನ ಹೊರಗೆ ಹೋಗುವ ದಾರಿ ತೋರಿಸಲಿ. ಬಹಳ ಉಪಕಾರ. ಇಬ್ಬರ ಜೀವವನ್ನು ಉಳಿಸಿದ ಪುಣ್ಯ ನಿಮಗೆ.

**ಖಂ:**—ಛೀ, ಮೂರ್ಖ! ಹೊರಟು ಹೋಗು.

**ತಾ:**—ಸರಿ, ಸರಿ! ಅವನನ್ನು ಹೆದ್ದಾರಿಯ ವರೆಗೆ ಮಾಡಿ ಬನ್ನಿ.

**ನೇ:**—(ತಾರೆಯನ್ನು ಎವೆಯಿಕ್ಕದೆ ನೋಡುತ್ತಾ ಅಡ್ಡಬಿದ್ದು ನಮಸ್ಕರಿಸಿ, ಬೇರೆ ಯುವರಿಗೂ ನಮಸ್ಕರಿಸಿ) ದಯೆಯಿರಲಿ ಬುದ್ಧೀ, ನನಗೊದಗಿದ

ಆಪತ್ತು ಮುಗಿಯಲಿ. ಇನ್ನೊಮ್ಮೆ ದರ್ಶನಕ್ಕೆ ಬರುವೆನು.
(ಹೋಗುತ್ತಾನೆ. ಸೇವಕರಿಬ್ಬರೂ ಅವನನ್ನನುಸರಿಸುತ್ತಾರೆ)

**ಖಂ:—** ಇಂತಹ ಪೋರರನ್ನು ಇಲ್ಲಿ ಇರಗೊಡಿಸಬಾರದು. ಯಾವಾವ ಕಾಲದಲ್ಲಿ ಯಾರಾರು ಬರುತ್ತಾರೆಂಬುದರ ನಿರ್ಣಯವಿಲ್ಲ.

**ತಾ:—** ಆಗಲಿ, ಖಂಡ್ಯಾ! ಇನ್ನೆಷ್ಟು ದಿವಸಗಳು?

**ಖಂ:—** ತಾರೇ! ಈಗ ಮತ್ತಷ್ಟೂ ಜಾಗ್ರತೆಯಲ್ಲಿರಬೇಕು. ಇಲ್ಲದಿದ್ದರೆ ಮಾಡಿದ ಕೆಲಸವೆಲ್ಲ ನೀರಮೇಲೆ ಹೋಮ ಮಾಡಿದಂತಾಗುವುದು.

ಮಾವ! ನೀವು ನಾಳೆಯೇ ಹೋಗುತ್ತೀರಷ್ಟೆ! ಶಿವಾಜಿ ರಾಮನವಮಿ ಪೂಜೆಗೆ ಬರುವಂತೆ ಮಾಡುವುದು ನಿಮ್ಮ ಪಾಲಿಗೆ.

**ರ:—** ಆಗಲಿ; ಪ್ರಯತ್ನಿಸುತ್ತೇನೆ.

**ತಾ:—** ಒಂದು ವೇಳೆ ಅವನು ಬಾರದಿದ್ದರೆ ನಮ್ಮ ಸಿದ್ಧತೆ?

**ಖಂ:—** ನಿರಾಶೆಗೆಡೆಯಿಲ್ಲ, ತಾರೇ! ಈ ಮೊದಲೆ ರಾಮನವಮಿ ಉತ್ಸವದ ವರ್ತಮಾನ ಊರುಗಳಲ್ಲಿ ಹಬ್ಬಿದೆ. ಅಲ್ಲದೆ, ರಾಮದಾಸಸ್ವಾಮಿಗಳ ಶಿಷ್ಯೋತ್ತಮರೇ ಇಲ್ಲಿರುವ ಯೋಗಿಗಳೆಂದು ಜನಜನಿತವಾಗಿದೆ. ನಮ್ಮ ಹೇಳಿಕೆಯಿಲ್ಲದೆಯೇ ಯೋಗಿಗಳ ಸಂದರ್ಶನಕ್ಕೆ ಅವನಾಗಿಯೇ ಬರಬಹುದು.

**ತಾ:—** ಏನೋ? ನನ್ನ ಮನಸ್ಸಿನಲ್ಲಿ ಮಾತ್ರ ಕಳವಳಕ್ಕಾರಂಭಿಸಿದೆ.

**ರ:—** ಅದು ಹಾಗೆಯೇ, ಮಗು! ಕೆಲಸವು ನೆರವೇರುವ ಕಾಲವು ಸಮೀಪಿಸಿದಂತೆ ಆತುರವು ಹೆಚ್ಚುವುದು.

**ಖಂ:—** ತಾರೇ! ಅಂಜಬೇಡ. ನಾವು ಕೃತಕಾರ್ಯರಾಗಲೇ ಬೇಕು. ನಾನು ಇಂದೇ ರಾತ್ರಿ ಹಿಂದೆ ಹೋಗುತ್ತೇನೆ. ಮಾವಯ್ಯನವರು ಹಿಂದಿರುಗಿದ ಕೂಡಲೆ ಶಿವಾಜಿಯ ವಿಚಾರವನ್ನು ನನಗೆ ತಿಳಿಸಬೇಕು. ನಾನು ಅಷ್ಟಮಿಯ ದಿವಸವೇ ಬರುವುದು.

**ತಾ:—** ಸರಿ! ನೀನು ಹೇಳಿದಂತೆಯೇ! ನಮ್ಮ ಕಾರ್ಯವಾಗಲೇಬೇಕು. ಆಗುವುದೆಂದು ನನ್ನ ಹೃದಯವು ಆಶ್ವಾಸನೆಯನ್ನು ಕೊಡುತ್ತದೆ. ಸರಿ! ನೀನು ಹೋಗಬಹುದು. ನಾವೂ ಸ್ವಲ್ಪ ನಿದ್ರಿಸುತ್ತೇವೆ.

# ಅಂಕ ೫

—

## ದೃಶ್ಯ ೧

(ಪುರಂದರ ಗಡ; ಸುಗುಣನಾಯಕನ ಮನೆ.
ಸುಗುಣನಾಯಕ, ನೇತಾಜಿನಾಯಕ, ಮತ್ತು ಹೈಮವತಿ,
ಇವರು ಮಾತನಾಡುತ್ತಾ ಇದ್ದಾರೆ.)

**ನೇ:**— ಈಗಿರುವುದು ಎರಡು ಮುಖ್ಯವಾದ ಕೆಲಸಗಳು. ಮಹಾರಾಜರು ಆಶ್ರಮಕ್ಕೆ ಹೋಗದಂತೆ ಮಾಡುವುದೊಂದು; ಶತ್ರುಗಳು ಮಾಡಿಟ್ಟ ಸುರಂಗದ ಮರ್ಮವನ್ನು ತಿಳಿವುದೊಂದು.

**ಸು:**—ಎರಡೂ ಸುಲಭ ಸಾಧ್ಯಗಳಲ್ಲ.

**ನೇ:**—ಏಕೆ ಭಾವಾ! ಸಾಧುಗಳು ಕಪಟಿಗಳೆಂಬುದನ್ನು ಮಹಾರಾಜರಿಗೆ ವ್ಯಕ್ತಗೊಳಿಸಿರಿ.

**ಸು:**—ಜಾವಳಿಯಲ್ಲಿರುವ ಯೋಗಿಗಳ ಪ್ರಭಾವವು ಜನಜನಿತವಾಗಿ ಮಹಾರಾಜರ ಕಿವಿಗೂ ಬಿದ್ದಿದೆ. ನಾನೊಬ್ಬನು ತದ್ವಿರುದ್ಧವಾಗಿ ಹೇಳಿ ಪ್ರಯೋಜನವೇನು?

**ನೇ:**—ಮಹಾರಾಜರಿಗೆ ನಿಮ್ಮಲ್ಲಿ ಅಭಿಮಾನವಿದೆ, ವಿಶ್ವಾಸವಿದೆ. ನಿಮ್ಮ ಮಾತನ್ನು ಅವರು ಮೀರುವಂತಿಲ್ಲ.

**ಸು:**—ಆದರೆ, ಸಾಧುಗಳ ಮೇಲಿರುವ ಭಕ್ತಿಗೌರವಗಳು ನನ್ನಲ್ಲಿರುವ ವಿಶ್ವಾಸಕ್ಕಿಂತ ಹೆಚ್ಚಾದವುಗಳು.

**ನೇ:**—ಹಾಗಾದರೆ, ಭಾವಾ! ನಾನು ನೋಡಿ ಬಂದ ಸಂಗತಿಗಳನ್ನು ಮಹಾರಾಜರಿಗೆ ತಿಳಿಸಿರಿ.

**ಸು:**—ಅದರಿಂದಲೂ ಪ್ರಯೋಜನವಿಲ್ಲ. ಅಲ್ಲಿ ಮೋಸಗಾರರಿದ್ದಾರೆಂದು ಕೇಳಿದರೆ ನಮ್ಮನ್ನು ಅವರೆಂದೂ ಹೋಗಗೊಡರು. ತಮಗಾಗಿ ಒಡ್ಡಿದ ಬಲೆಯನ್ನು ತಾವೇ ಕೀಳಬೇಕೆಂದು ಹಟ ಮಾಡಬಹುದು.

**ನೇ:**— ಅದರ ಪರಿಣಾಮವು ಪ್ರಾಣಾಪಾಯವೆಂದು ವಿಶದಗೊಳಿಸಿದರೆ?

**ಸು:** —(ನಕ್ಕು)—ಓಹೋ! ಜೀವದಾಸೆಯಿಂದ ಅವರು ಹಿಂಜರಿಯಬಹುದೆಂದೇ ನಿನ್ನ ಭಾವನೆ.

**ನೇ:**— ಹಾಗಲ್ಲ, ಭಾವಾ! ಅವರ ಪ್ರಾಣರಕ್ಷಣೆಯೇ ನಮ್ಮೆಲ್ಲರ ಕರ್ತವ್ಯವಲ್ಲವೇ? ಪ್ರಾಣಾಪಾಯವಿರುವ ಆ ಸ್ಥಳಕ್ಕೆ ಅವರು ಹೋಗಬಾರದೆಂಬ ನಮ್ಮ ಬಿನ್ನಹವನ್ನು ಅವರು ಮನ್ನಿಸಬೇಕೆಂದು ನೀವು ಬೇಡಿಕೊಳ್ಳಬೇಕು.

**ಸು:**— ನೇತಾ! ಅದಕ್ಕಿಂತ, ನಾವೊಂದು ಸೈನ್ಯವನ್ನೇ ತೆಗೆದುಕೊಂಡು ಹೋಗಿ ಆಶ್ರಮವನ್ನಾಕ್ರಮಿಸಿದರೇನು?

**ನೇ:**— ಅವರೂ ನಾವೂ ಧ್ವಂಸವಾಗುವುದು. ಬಹುಶಃ ಅವರ ವಿದ್ಯಮಾನದ ಸಂಪೂರ್ಣ ಜ್ಞಾನವಿಲ್ಲ ನಿಮಗೆ.

**ಸು:**— ಮೋಸದಿಂದ ನಮ್ಮನ್ನು ಸುರಂಗಕ್ಕಿಳಿಸಿ ಬಂಧಿಸುವ ದುರಾಲೋಚನೆಯಿಂದಿರಬಹುದು. ಅಲ್ಲವೇ?

**ನೇ:**—ಓಹೋ! ಇದೇಯೋ ನಿಮ್ಮ ಊಹೆ? ಹಲವು ಜನರನ್ನು ಅಂತಹ ಸುರಂಗದಲ್ಲಿ ಬಂಧಿಸಿಯೇನು ಪ್ರಯೋಜನ? ಅದನ್ನು ಕೊರೆದು ಹೊರಗೆ ಬರುವುದು ಅಸಾಧ್ಯವೇ?

**ಸು:**— ಹೂಂ! ನೀನೇ ಹೇಳಿಬಿಡು. ಅವರ ದುರುದ್ದೇಶವೇನು?

**ನೇ:**—ನನ್ನದೂ ಊಹೆಯಷ್ಟೆ! ಆದರೆ ಹೆಚ್ಚು ಸಂಭವನೀಯವು. ನನ್ನ ಊಹೆಯಂತಾದರೆ ಅವರು ನರರೂಪದಲ್ಲಿರುವ ರಾಕ್ಷಸರು!

**ಹೈ:**—ಹಾಗೆಂದರೆ?

**ನೇ:**— ಅದನ್ನು ಸ್ಮರಿಸುವಾಗ ನನ್ನ ಮೈಜುಮ್ಮೆನ್ನುತ್ತದೆ! ಅಂತಹ ಭಯಂಕರ ಕೃತ್ಯವನ್ನುದ್ದೇಶಿಸಿದ್ದಾರೆ, ಅವರು.

**ಸು:**— ಏನದು? ಹೇಳಬಾರದೆ?

**ನೇ:** — ಮತ್ತೇನು? ಸುರಂಗದಲ್ಲಿ ಸಿಡಿಮದ್ದನ್ನು ತುಂಬಿ ನಾವಲ್ಲಿರುವಾಗ ಅದನ್ನು ಸ್ಫೋಟನಗೊಳಿಸುವುದು.

**ಹೈ:** — ಅಬ್ಬ! ನೇತಾ! ಅದನ್ನು ಸಮಾಪಿಸಿದವರಿಗೆ ಉಳಿಗಾಲವಿಲ್ಲ!

**ನೇ:**—ಅದಕ್ಕೆಯೇ ಮಹಾರಾಜರು ಅಲ್ಲಿಗೆ ಹೋಗಬಾರದೆಂದು ನಾನು ಹೇಳುವುದು.

**ಹೈ:**—ನಿಜ! ನಿಜ! (ಗಂಡನ ಕಡೆಗೆ ತಿರುಗಿ) ಈ ವಿಷಯವನ್ನು ಮಹಾ ರಾಜರಿಗೆ ಮಂತ್ರಿಸಭೆಯಲ್ಲಿ ಅರಿಕೆಮಾಡಿ. ನೀವು ಹೇಗೂ ಸೇನಾನಾಯಕರಷ್ಟೆ! ಈ ಕಷ್ಟದಿಂದ ಮಹಾರಾಜರನ್ನೂ ನಿಮ್ಮ ಪಕ್ಷದವರನ್ನೂ ಪಾರಾಗಿಸುವುದರಲ್ಲಿಯೇ ಇರುವುದು ನಿಮ್ಮ ಜಾಣ್ಮೆ.

**ಸು:**—ಅದನ್ನೆ ಆಲೋಚಿಸುತ್ತೇನೆ. ಆದರೆ, ನೇತಾನ ಕಲ್ಪನೆ ಸರಿಯಲ್ಲ. ಹಾಗೆ ಸ್ಫೋಟನಗೊಳಿಸಿದರೆ ಅವರ ಗತಿ! ಆಗಲಿ, ನಾವು ತಿಳಿಯು ದವರು; ಅವರು ಗುಟ್ಟನ್ನು ತಿಳಿದವರು. ತಿಳಿದೂ ತಿಳಿದೂ ಸ್ವನಾಶದ ಮಾರ್ಗವನ್ನನುಸರಿಸುವರೇ? ಛೇ! ಇದಕ್ಕೆ ಯಾರ ಮನಸ್ಸೂ ಒಪ್ಪದು.

**ನೇ:**—ಅದೇಕೋ? ನಮ್ಮನ್ನು ನಂಬಿಸಿ ಅಲ್ಲಿ ಕುಳ್ಳಿರಿಸಿ ಅವರು ಓಡಿ ಹೋಗಲೂ ಬಹುದು.

**ಸು:**—ಛೇ! ನಮ್ಮ ಮೇಲಣ ದ್ವೇಷದಿಂದ, ಅಲ್ಲಿಗೆ ಬರುವ ಸಾವಿರಾರು ಜನರನ್ನೂ, ತಮ್ಮ ಕಡೆಯವರನ್ನೂ ಕೊಲ್ಲಲಿಕ್ಕೆ ಅವರೇನು ನರಪಿಶಾಚಿಗಳೇ?

**ನೇ:**—ಭಾವಾ! ಉದ್ರೇಕಗೊಂಡವನು ಸ್ವಾರ್ಥಕ್ಕೋಸ್ಕರ ಎಂತಹ ಭೀಕರ ಕೃತ್ಯವನ್ನೂ ಮಾಡಬಲ್ಲನು.

**ಹೈ:**—ನೇತಾ! ತಾರೆಯಲ್ಲಿ ಸ್ತ್ರೀಸಹಜವಾದ ಕಾರುಣ್ಯವಿಲ್ಲವೇ?

**ನೇ:**—ಅದನ್ನಾಧರಿಸಿಯೇ ನಮ್ಮ ರಕ್ಷಣೆಯ ಮಾರ್ಗವನ್ನು ಹುಡುಕ ಬೇಕು.

**ಹೈ:**—ಏನೋ? ನೀನು ಹೇಳಿದಂತೆಯೇ ಇರಬಹುದು. ರಾಮನವ ಮಿಯ ದಿನ ಮಹಾರಾಜರು ಯೋಗೀಶ್ವರರ ದರ್ಶನಾರ್ಥಿ ಗಳಾಗಿ ಬರುವುದರಿಂದ ಬೇರೆ ಯಾರೂ ಆ ದಿವಸ ಬರಬಾರ ದೆಂದು ಆಜ್ಞೆಯಾಗುತ್ತದಂತೆ.

**ನೇ:**—ಹಾಗಾದರೆ, ನನ್ನ ಊಹೆಯೇ ಸರಿಯಲ್ಲವೇ? ಮಹಾರಾಜರನ್ನೂ ಅವರ ಅನುಚರರನ್ನೂ ಅಲ್ಲಿ ಸೇರಿಸುವ ಆಲೋಚನೆಯಲ್ಲವೇ ಇದು?

**ಸು:**—ಆಗಲಿ ನೇತಾ! ಅವರು ಮನಸ್ಸಿನಲ್ಲಿ ಮುಂಡಿಗೆ ತಿನ್ನಲಿ. ನಾವು ಅರಣ್ಯದ ಆ ಭಾಗಕ್ಕೆ ಹೋಗುವುದೇ ಬೇಡ. ತಮ್ಮ ಕುಹಕೋಪಾಯಗಳು ಬಯಲಾದುವೆಂದು ತಿಳಿದರೆ ಆ ಮೇಲೆ ತಣ್ಣಗಾಗುವರು. ನಿರಾಶೆಗೊಳ್ಳುವರು. ಸಾಧುಗಳ ಅಸಾಧುತ್ವವೂ ತನ್ನಷ್ಟಕ್ಕೆಯೇ ಪ್ರಕಟವಾಗುವುದು.

**ನೇ:**—ಭಾವಾ! ನಮ್ಮ ಗಡಿನಾಡಿನಲ್ಲಿಯೇ ನಮಗರಿಯದ ಅಂತಹ ಸುರಂಗಗಳನ್ನಿಡುವುದು ಹಿತಕರವಲ್ಲ!

**ಸು:**—ಸುರಂಗದ ವಿಚಾರವು ನಮಗೆ ತಿಳಿದಾಯಿತಲ್ಲವೇ? ಖಂಡೋಜಿ ದೊಡ್ಡ ಸೈನ್ಯವನ್ನಿಟ್ಟುಕೊಂಡು ಅದನ್ನು ಎಷ್ಟು ಕಾಲ ಕಾಯುವನು! ಸ್ವಲ್ಪ ಸಮಯದಲ್ಲಿಯೇ ನಾವದನ್ನು ಸುಲಭವಾಗಿ ಸ್ವಾಧೀನಪಡಿಸಿಕೊಳ್ಳಬಹುದು.

**ಹೈ:**—ಹಾ! ಇದು ಒಳ್ಳೆಯ ಉಪಾಯ. ಅವರ ಮೋಸಕ್ಕೆ ತಕ್ಕುದಾದ ಹಂಚಿಕೆ.

**ಸು:**—ಇಷ್ಟು ಕಷ್ಟಪಟ್ಟು ಮಾಡಿದ ಕೆಲಸವೆಲ್ಲ ನಿರರ್ಥಕವಾಗಬೇಕು. ಅಲ್ಲಿದೆ ಸ್ವಾರಸ್ಯ!

**ನೇ:** - (ಆಲೋಚಿಸುತ್ತಾ ಕುಳಿತುಕೊಳ್ಳುತ್ತಾನೆ.)

**ಹೈ:**—ಏನು ನೇತಾ? ನಿನ್ನ ಒಪ್ಪಿಗೆಯಿಲ್ಲವೆ ಇದಕ್ಕೆ?

**ನೇ:**—ಒಪ್ಪಿಗೆಯೇ, ಮತ್ತೇನು? ರಾಜಕಾರ್ಯದ ದೃಷ್ಟಿಯಿಂದ ಇದಕ್ಕಿಂತ ಉತ್ತಮವಾದ ಮಾರ್ಗವಿಲ್ಲ.

**ಸು:**—ನಾವು ವಿಮರ್ಶಿಸುವುದಾದರೂ ರಾಜಕಾರ್ಯವನ್ನೆ.

**ಹೈ:**—ಏನೋ, ನಮ್ಮ ನೇತಾಜಿಗೆ ಸ್ವಲ್ಪ ಸ್ವಕಾರ್ಯವೂ ಇದೆ. ಅಲ್ಲವೇ?

**ನೇ:**—ಸ್ವಕಾರ್ಯಕ್ಕೂ ರಾಜಕಾರ್ಯಕ್ಕೂ ಸಂಬಂಧವಿಲ್ಲ. ರಾಜಕಾರ್ಯದ ಹಿತವೇ ಪ್ರಧಾನವಾದುದು. ಅದಕ್ಕೋಸ್ಕರ ಮೊದಲನೆಯದನ್ನು ಮರೆಯಬೇಕು.

**ಸು:**—ಆಹಾ! ಹಾ! ಅಕ್ಕ, ತಮ್ಮ; ನಿಮ್ಮ ಗುಟ್ಟು ನಿಮ್ಮೊಳಗೆಯೇ.

**ಹೈ:**—ಗುಟ್ಟೇನು ಬಂತು? ಎಂದರೆ, ನಿಮಗೆ ಗೊತ್ತಿಲ್ಲವೆ? ಅವನಿಗೆ ಪಾಪ, ಆ ತಾರೆಯ ವಿಚಾರವೇ, ಇನ್ನೂ.

**ಸು:**—ಓಹೋ! ಒಳ್ಳೆಯ ಆಲೋಚನೆ. ದಾರಿಯಲ್ಲಿ ಹೋಗುವ ಮಾರಿಯನ್ನು ಮನೆಹೊಗಿಸುವ ಆಲೋಚನೆ. ನೇತಾ! ಬಿಡು ಅವಳ ಚಿಂತನೆಯನ್ನು.

(ನೇತಾಜಿ ತಲೆತಗ್ಗಿಸಿ ಕುಳಿತುಕೊಳ್ಳುವನು.)

**ಹೈ:**—ಅಬ್ಬ! ನೇತಾ, ಇನ್ನೂ ನಿನಗವಳಲ್ಲಿ ಪ್ರೇಮವೇ? ವಿಶ್ವಾಸವೇ?

**ನೇ:**—'ಪ್ರೀತಿ ಸ್ಥಿತಿಗತಿಗಳನ್ನನುಸರಿಸುವುದಿಲ್ಲ' ಅಲ್ಲವೇ ಅಕ್ಕಾ? 'ಪ್ರೀತಿಸುವುದೆಂದರೆ ಮನಃಪೂರ್ತಿಯಾಗಿ.'

**ಹೈ:**—ಏನು? ಪ್ರೀತಿಗೆ ಅಯೋಗ್ಯವಾದ, ಕ್ಷುದ್ರವಾದ ವ್ಯಕ್ತಿಯೆಂದು ತಿಳಿದೂ?

**ನೇ:**—ಛೇ! ಯಾರೋ ಏನೋ ಹೇಳುತ್ತಾರೆಂದು ಅವಳನ್ನು ಜರೆದಾಡಬಾರದು.

**ಸು:**—ನೀನೇ ಹೇಳಿದೆಯಲ್ಲ? ಅವರೆಲ್ಲರೂ ಒಂದೇ ಕೂಟದವರೆಂದು; ದೀರ್ಘಾಲೋಚನೆಮಾಡಿದರು ನೀನಿರುವಾಗಲೇ ಎಂದು?

**ನೇ:**—ಹೇಳಿದುದು ನಿಜ. ಆದರೆ ಖಂಡೋಜಿಯ ಕುಟಿಲತೆಯ ಬಲೆಯಲ್ಲಿ ಅವಳು ಸಿಕ್ಕಿಬಿದ್ದಿದ್ದಾಳೆಂದೇ ನನ್ನ ಭಾವನೆ.

**ಸು:**— ಹೂಂ! 'ಆಕಾಶಗೋಪುರವನ್ನು ಕಟ್ಟು'-ಅಬ್ಬ! ಎಂತಹ ಹೇಯವಾದ ಕೆಲಸವನ್ನು ಮಾಡಲಿಕ್ಕೆ ಅವಳು ಸಿದ್ಧಳಾಗಿದ್ದಾಳೆ!

**ನೇ:**—ಅವಳ ತಂದೆಯ ಮರಣಾನಂತರ ಅವಳನ್ನು ಮಾತನಾಡಿಸುವ ಸುಯೋಗವು ನನಗೊದಗಲಿಲ್ಲ. ಖಂಡೋಜಿಯು ದುರ್ಬೋಧನೆಗೊಳಗಾಗಿ ಪಾಪ, ಅವಳು ಈ ಪ್ರತೀಕಾರಕ್ಕೆ ಕೈಹಚ್ಚಿರಬಹುದು. ನೈಜಸ್ಥಿತಿಯನ್ನು ತಿಳಿದರೆ ಈಗಲೂ ಅವಳ ಬುದ್ಧಿ ಬದಲಾಗಬಹುದೆಂದೇ ನನ್ನ ನಂಬುಗೆ.

**ಹೈ:**—ಆಗಲಿ; ಈಗೇನು ಮಾಡಬೇಕೆಂದು ನಿನ್ನ ಆಲೋಚನೆ?

**ನೇಃ**—ರಾಮನವಮಿಯ ದಿನ ಮಹಾರಾಜರನ್ನು ಅವರು ಪ್ರತೀಕ್ಷಿಸುತ್ತಾರಷ್ಟೆ! ಅಂದು ನಾನು ಅಲ್ಲಿಗೆ ಹೋಗಿ ಧೈರ್ಯದಿಂದ ತಾರೆಯನ್ನು ಮಾತನಾಡಿಸಬೇಕೆಂದು.

**ಸುಃ**—ಖಂಡೋಜಿಯ ಬಲೆಯಲ್ಲಿ ಬಿದ್ದು ಸಾಯಬೇಕೆಂದು!

**ನೇಃ**—ಅದನ್ನು ಮುರಿಯಲು ಸಾಧ್ಯವಾಗದಿದ್ದರಲ್ಲವೇ?

**ಹೈಃ**—ಅಪ್ಪಾ, ನೇತಾ. ಈಗಣ ಅವರ ಕಾರ್ಯಭಾಗವು ತೀರಲಿ; ನಿರಾಶೆಗೊಂಡು ಅವಳೂ ವಿಶಾಲಗಡವನ್ನು ಸೇರಲಿ. ಆಗ ನೀನು ಹೋಗಿ ಅವಳನ್ನು ನೋಡಬಹುದು.

**ನೇಃ**—ಅವಳು ಅಂದಿನವರೆಗೆ ಬದುಕಬೇಕಷ್ಟೆ!

**ಸುಃ**—ಇಷ್ಟೆಲ್ಲ ತಂತ್ರಗಳನ್ನು ಮಾಡಿಸುವ ಮಾಟಗಾರ್ತಿ, ಅಷ್ಟು ಸುಲಭದಲ್ಲಿ ಸಾಯಲಿಕ್ಕಿಲ್ಲ. ನೇತಾ! ಅಂಜಬೇಡ!

**ಹೈಃ**—ಅಲ್ಲದೆ, ನಿನ್ನನ್ನು ಅವಳು ಪ್ರೀತಿಸುವುದು ನಿಜವಾಗಿದ್ದರೆ ನಿನ್ನನ್ನು ಕರೆಕಳುಹಿಸುತ್ತಿದ್ದಳು; ನಿನಗೇನಾದರೂ ಸಂದೇಶವನ್ನು ಕಳುಹಿಸುತ್ತಿದ್ದಳು. ಆ ಸಖಿ ಅಲ್ಲಿಯೇ ಇದ್ದಳಲ್ಲವೇ? ಮಾರೋಜಿ ನಿನ್ನ ನಚ್ಚಿನ ಬಂಟನೆಂಬುದನ್ನು ತಿಳಿದಿದ್ದಳಲ್ಲವೇ?

**ನೇಃ**—ಅಕ್ಕಾ! ಪ್ರೇಮದ ವಿಚಾರವು ಹಾಗಿರಲಿ! ಅವಳ ಸ್ವಭಾವವನ್ನು ನೀವರಿಯಿರಿ. ಈ ಕಾರ್ಯದಲ್ಲಿ ಭಗ್ನಮನೋರಥಳಾದಂವೇ ಅವಳು ಪ್ರಾಣತ್ಯಾಗ ಮಾಡಬಹುದೆಂದು ನನ್ನ ಭಯ.

**ಸುಃ**—ಓಹೋ! ಹೋ! ತಂದೆಗೆ ಅಪಮಾನವಾದಾಗ, ತಂದೆ ಸತ್ತಾಗ, ಆತ್ಮಹತ್ಯೆ ಮಾಡಿಕೊಳ್ಳದವಳು ಮಹಾರಾಜರನ್ನು ಕೊಲ್ಲಲಿಕ್ಕಾಗಲಿಲ್ಲವೆಂದು ಪ್ರಾಣತ್ಯಾಗಮಾಡಿಕೊಳ್ಳಬಹುದು; ಅಲ್ಲವೇ? ನಿನಗೆ ಹುಚ್ಚು.

**ನೇಃ**—ಮಹಾರಾಜರ ಮೇಲಣ ಅಪವಾದವನ್ನೆ ನಂಬಿ, ಕ್ಷೋಭೆಗೊಂಡು, ಉದ್ರೇಕಗೊಂಡ ಬುದ್ಧಿಯಿಂದ ಪ್ರತೀಕಾರಕ್ಕೆ ಪ್ರಯತಿಸಿರಬಹುದು. ಆದರೆ ಕಾರ್ಯವು ಮಿಂಚಿಹೋದ ಮೇಲೆ ವಿವೇಕೋದಯವಾದರೆ ಪಶ್ಚಾತ್ತಾಪವೂ ನಿರುತ್ಸಾಹವೂ ಉಂಟಾಗಬಹುದು. ಅವಳ ಹೃದಯದ ಕೋಮಲತೆಯನ್ನು ನೀವರಿಯಿರಿ.

**ಸು:**— ಹೋಗಪ್ಪಾ ಹೋಗು! ನೀನು ಹೋದಕೂಡಲೆ ನಿನಗೊಲಿದು ವರಮಾಲೆಯನ್ನು ಹಾಕುವಳು. ಸೈನಿಕರು ಬೇಡ, ವಾದ್ಯದವರನ್ನು ಜತೆಗೂಡಿಗೊಂಡು ಹೋಗು.

**ನೇ:**—ಇಲ್ಲ ಭಾವಾ! ಆ ಆಶೆಯಿಲ್ಲ. ಆದರೆ, ಅವಳ ಮನಸ್ಸನ್ನು ತಿರುಗಿಸಬಹುದೆಂದು ನನ್ನ ನಿರೀಕ್ಷೆ.

**ಹೈ:**—ಅಯ್ಯೋ, ನೇತಾ! ಮಾತನಾಡಲಿಕ್ಕೆ ಎಡೆಸಿಕ್ಕಿದರಲ್ಲವೇ ಮನಸ್ಸನ್ನು ತಿರುಗಿಸುವುದು? ನೀನು ಹೋದ ಕೂಡಲೆ ನಿನ್ನನ್ನು ಗೊತ್ತುಹಚ್ಚಿದರೆ.

**ನೇ:**—ಅಬ್ಬ, ನಿನ್ನ ಸಂಶಯಗಳೇ! ಖಂಡೋಜಿಗೆ ಜೀವವೆಂದರೆ ಜೇನಿಗಿಂತ ಸವಿ. ಅವನಲ್ಲಿರುವ ವರೆಗೆ ನನಗೆ ಭಯವಿಲ್ಲ. ಅವರು ಹಾಗೇನೂ ದುಡುಕಲಿಕ್ಕಿಲ್ಲ.

**ಸು:**— ಖಂಡೋಜಿಯೇ ನಿನ್ನನ್ನಾಕ್ರಮಿಸಿದರೆ?

**ನೇ:**—(ನಕ್ಕು) ತಾರೆಯ ಇದಿರಲ್ಲಿ ಅವನೆಂದೂ ಹಾಗೆ ಮಾಡನು. ಒಂದು ವೇಳೆ ಅವನು ಮುಂದೊತ್ತಿದರೆ—ನನ್ನ ಖಡ್ಗವಿದೆ.

**ಹೈ:**—ಹಾಗಾದರೆ ಮಹಾರಾಜರು ರಾಮನವಮಿಯ ದಿನ ಅಲ್ಲಿಗೆ ಹೋಗಬಾರದು; ನೀನಲ್ಲಿಗೆ ಹೋಗಬೇಕು; ಅಲ್ಲವೆ?

**ನೇ:**— ನನ್ನ ಸೂಚನೆ ಹಾಗೆ. ಇನ್ನು ಭಾವಯ್ಯನವರ ಇಷ್ಟ.

**ಸು:**—ನನಗೇನು? ಮಂತ್ರಿಮಂಡಲದವರಿಗೆ ಮೊದಲು ಈ ವಿಚಾರಗಳನ್ನೆಲ್ಲ ತಿಳಿಸುತ್ತೇನೆ. ಆ ಮೇಲೆ ನಮ್ಮ ನಿರ್ದಿಷ್ಟ ಅಭಿಪ್ರಾಯವನ್ನು ಮಹಾರಾಜರಿಗೆ ಅರಿಕೆ ಮಾಡುತ್ತೇನೆ.

**ನೇ:**— ಮಹಾರಾಜರ ಪರವಾಗಿ ನಾನಲ್ಲಿಗೆ ಹೋಗುವುದೆಂಬುದನ್ನೂ ತಿಳಿಸಿರಿ.

**ಸು:**—ಏನು? ನೀನೇ ಮಹಾರಾಜನಾಗುವುದೊ?

**ನೇ:**— ಕಪಟ ಯೋಗಿಗಳನ್ನು ಪೂಜಿಸಲಿಕ್ಕೆ ಕಪಟ ಮಹಾರಾಜರು ಹೋಗಲಿ! ಅರಣ್ಯದ ಗಡಿಯ ವರೆಗೆ ಮಹಾರಾಜರಂತೆ ಮೆರವಣಿಗೆಯಲ್ಲಿ ಹೋಗುವುದು. ಅನಂತರ ಕೆಲವು ಸೈನಿಕರೊಡನೆ ಆಶ್ರಮಕ್ಕೆ ಹೋಗುವುದು.

**ಸು:**—ಇದನ್ನೆ ಹುಚ್ಚೆನ್ನುವುದು. ನಿನ್ನನ್ನು ಗುರುತಿಸುವುದಿಲ್ಲವೇ ಅವರು?

**ನೇ:**—ಅಲ್ಲಿಗೆ ಹೋದಮೇಲೆ ಗುರುತಿಸಿದುದರಿಂದ ಬಾಧೆಯಿಲ್ಲ.

**ಸು:**—ನನಗೇನು? ಮಹಾರಾಜರ ಅನುಮತಿಯನ್ನು ಪಡೆಯಲಿಕ್ಕೆ ಪ್ರಯತ್ನಿಸುತ್ತೇನೆ. (ಹೋಗುತ್ತಾನೆ. ಇಬ್ಬರೂ ಎದ್ದು ನಿಲ್ಲುತ್ತಾರೆ.)

**ಹೈ:** ಮಗೂ, ನೇತಾ! ಚೆನ್ನಾಗಿ ವಿಚಾರಿಸಿಕೋ? ಅನಾವಶ್ಯಕವಾಗಿ ಪ್ರಾಣವನ್ನು ಕಳೆದುಕೊಳ್ಳಬೇಡ.

**ನೇ:**—ಅಕ್ಕಾ! ನನ್ನಲ್ಲಿ ನಿನ್ನ ವಾತ್ಸಲ್ಯವನ್ನು ಬಲ್ಲೆನು. ಆದರೆ, ಕರ್ತವ್ಯಬಾಹಿರನಾಗು ಎನಬೇಡ.

**ಹೈ:**—ಹಾಗೆಂದವರಾರು? ಯುದ್ಧರಂಗದಲ್ಲಿ ಸ್ವಪಕ್ಷಕ್ಕೋಸ್ಕರ ಹೊಡೆದಾಡುತ್ತಾ ನೀನು ಮೃತಿಯನ್ನೈದಿದರೆ, ಅಥವಾ ಮಹಾರಾಜರ ಮಹಾಕಾರ್ಯವನ್ನು ಸಾಧಿಸುವಾಗ ದುರ್ಮರಣವೊದಗಿದರೆ ನಾನು ದುಃಖಿಸೆನು, ನೇತಾ! ಆದರೆ, ಯಾರೋ ಒಬ್ಬಳು ಹುಡುಗಿಗೋಸ್ಕರ . . .

**ನೇ:**—ಅಕ್ಕಾ! ಕ್ಷಮಿಸು! ಯಾರೋ ಒಬ್ಬಳಲ್ಲ. ನನ್ನ ಮನಸ್ಸನ್ನಪಹರಿಸಿದವಳು; ನನ್ನನ್ನು ಮನಃಪೂರ್ವಕವಾಗಿ ಪ್ರೀತಿಸುವವಳು; ನನಗೋಸ್ಕರ ತನ್ನ ಸುಖಕ್ಕೆ ತಿಲಾಂಜಲಿಯನ್ನಿತ್ತಿರುವವಳು; ನನ್ನನ್ನು ಹೃತ್ಪೂರ್ವಕವಾಗಿ ವರಿಸಿದವಳು; ಮತ್ತು ತನ್ನ ಸ್ಮರಣೆಗೆಂದು, ಕಣ್ಣೀರು ಸುರಿಸುತ್ತ, ನನಗೆ ಈ ಉಂಗುರವನ್ನು ಅರ್ಪಿಸಿದವಳು. ಅವಳು ನನ್ನವಳೇ! ಅವಳು ಕೆಟ್ಟಕೆಲಸದಲ್ಲಿ ಪ್ರವರ್ತಿಸುವಾಗ ಅವಳನ್ನು ಸರಿದಾರಿಗೆಳೆವುದು ನನ್ನ ಕರ್ತವ್ಯವಲ್ಲವೇ? ಇಷ್ಟರವರೆಗೆ ನಾನು ತಡೆದುದೇ ಅಪರಾಧವು. ಅವಳನ್ನು ದುಷ್ಟರ ಆಶ್ರಯದಲ್ಲಿರಗೊಳಿಸಿದುದೇ ನನ್ನ ತಪ್ಪು. ಅಕ್ಕಾ! ಚಿಂತಿಸಬೇಡ.—ಯಶಸ್ವಿಯಾದರೆ ಒಬ್ಬಳು ಅಬಲೆಯನ್ನು, ಏಕೆ?—ನನ್ನ ಅರ್ಧಾಂಗಿಯನ್ನು ರಕ್ಷಿಸಿದ, ಕೀರ್ತಿಗೊಂಡ ಪುರಾತನವಂಶವೊಂದನ್ನುಳಿಸಿದ ಪುಣ್ಯ—ಇಲ್ಲದಿದ್ದರೆ ನಶ್ವರವಾದ ದೇಹವನ್ನು ಉದಾತ್ತವಾದ ಕಾರ್ಯದಲ್ಲಿ ಬಲಿಗೊಟ್ಟ

ಕೀರ್ತಿ. ಈ ನಿರ್ಣಯದಲ್ಲಿ ವ್ಯತ್ಯಾಸವಾಗದು. ಅಕ್ಕಾ! ನನ್ನನ್ನು ಕ್ಷಮಿಸು. ತಮ್ಮನು ಅವಿಧೇಯನೆಂದು ತಿಳಿಯಬೇಡ. (ಎಂದು ಕುಳಿತುಬಿಡುವನು.)

**ಸೈ:**—(ಸಮೀಪಕ್ಕೆ ಹೋಗಿ, ಬೆನ್ನುಸವರುತ್ತಾ) ಆಗಲಿ, ಮಗು! ನಿನ್ನ ಭಾವ ಬರಲಿ. ಮಹಾರಾಜರ ಅನುಜ್ಞೆಯಾಗಲಿ. ಅವರ ಅಪ್ಪಣೆಯಾದರೆ ಅಂಬಾಭವಾನಿಯ ಅನುಗ್ರಹವಿದೆ. ಹೆದರ ಬೇಡ.

---

## ದೃಶ್ಯ ೨

(ಜಾವಳಿಯ ಅರಣ್ಯ. ಆಶ್ರಮದ ಹಿಂಭಾಗ. ಖಂಡೋಜಿಯ ಪ್ರವೇಶ.)

**ಖಂ:**—(ಆಲೋಚಿಸುತ್ತಾ) (ಆತ್ಮಗತ) ಇದೀಗ ಗಹನವಾದ ಪ್ರಶ್ನೆ. ಈ ಯಜ್ಞದಲ್ಲಿ ಶಿವಾಜಿ ಆಹುತಿಯಾಗುತ್ತಾನಷ್ಟೆ! ಆದರೆ, ನೇತಾಜಿ!–ನೇತಾಜಿ ಬರಬಹುದೆ ಇಲ್ಲಿಗೆ? ಓಹೋ! ಬಂದೇ ಬರುವನು. ಹೊಸ ಸರದಾರನಲ್ಲವೇ? ರಾಜನ ಅನುಗ್ರಹ ವನ್ನು ಸಂಪಾದಿಸುವುದಕ್ಕೆಂದು ಬೆನ್ನ ಹಿಂದೆಯೇ ಇರುವನು. ಎತ್ತಿದ ಬಾಲ ಹಿಡಿದವರ ಸ್ವಭಾವವೇ ಹಾಗೆ! ಬರಲಿ! ಬಂದರೆ ಅವನ ಕಥೆ ಮುಗಿಯುವುದು.

(ನಗುತ್ತಾ) ಅಬ್ಬ! ನಮ್ಮ ಯೋಗಿಗಳ ಪ್ರಭಾವವೇ? ನೆಟ್ಟಗೆ ಸ್ವರ್ಗಲೋಕಕ್ಕೆ–ಅಲ್ಲ, ಆ ನರಕಕ್ಕೋ–ಕಳುಹಿಸಲು ಸಮರ್ಥರು ನಮ್ಮ ಸಾಧುಗಳು! ಈ ಮೂಢಜನರು ಸ್ವರಾಜ್ಯವನ್ನು ಸ್ಥಾಪಿಸುವ ರಂತೆ. ಯಾರೋ ಒಬ್ಬರು ಮಹಾತ್ಮರು–ಯೋಗಿಗಳು–ಬಂದಿದ್ದಾ ರೆಂದ ಕೂಡಲೆ ಆರಂಭವಾಯಿತು; ಹತ್ತಿಪ್ಪತ್ತು, ನೂರಿನ್ನೂರು, ಸಾವಿ ರಾರು ಜನರು ಬಂದರಪ್ಪಾ, ಬಂದರು. ಹೂಂ! ಎಲ್ಲರಿಗೂ ಪ್ರಸಾದ, ಆಶೀರ್ವಾದ, ಅನುಗ್ರಹ. ಇನ್ನೇನು? ಸ್ವಗಲೋಕದಿಂದಲೆ ಬರುತ್ತದೆ ಅವರಿಗೆಲ್ಲ ವಿಮಾನ.

ಅಲ್ಲ! ಆ ಶಿವಾಜಿಗಾಗಲಿ ಅವನ ಕಡೆಯುವರಿಗಾಗಲಿ ಒಂದಿಷ್ಟೂ ಬುದ್ಧಿಯಿಲ್ಲವೇ? ಬಹುಶಃ ಮಿದುಳಿದ್ದವನು ಶಿವಾಜಿಯ ಪಕ್ಷದಲ್ಲಿ ಒಬ್ಬನೂ ಇಲ್ಲ. ಯೋಗಿಗಳು ಎಲ್ಲಿಂದ ಬಂದವರು, ಎಲ್ಲಿಗೆ ಹೋಗುವವರು, ಅರಣ್ಯದಲ್ಲೇಕಿದ್ದಾರೆ ಎಂಬ ವಿಚಾರವಾದರೂ ಬೇಡವೇ? ಪಾಪ! ಇಂತಹ ಪ್ರಾಣಿಗಳೂ ಸ್ವರಾಜ್ಯವನ್ನು ಸ್ಥಾಪಿಸುವುದಂತೆ!

ಅದಿರಲಿ! ಈ ಸಾವಳ್ಯನನ್ನೇನುಮಾಡುವುದು? ನನ್ನ ಎಲ್ಲಾ ಕಾರ್ಯಕಲಾಪಗಳನ್ನು ಅವನು ಬಲ್ಲನು. ಅವನು ಬದುಕಿದರೆ ಗುಟ್ಟುರಟ್ಟಾಗುವ ಸಂಭವವಿದೆ. ಈಗಂತೂ ತಾರೆಯು ಸಲುಗೆ ಸಿಕ್ಕಿದೆ ಅವನಿಗೆ. ಇನ್ನು ಅವನಿಗೆ ನನ್ನಾಶ್ರಯವೇಕೆ? ಅಲ್ಲದೆ ಅವನ ದುರಾಶೆ ಹೆಚ್ಚುತ್ತಿದೆ. ಈಗ ನನ್ನ ಸೇವಕನಲ್ಲ ಅವನು; ನನ್ನ ಸರಿಸಮಾನನಂತೆಯೇ ಮಾತನಾಡುತ್ತಾನೆ; ಒಮ್ಮೊಮ್ಮೆ ನನ್ನನ್ನೆ ಗದರಿಸಲಿಕ್ಕೆ ಆರಂಭ.—ಅವನಿಗೆ ಜಮೀನು ಕೊಡಬೇಕಂತೆ; ಮತ್ತೆ ಸೇನಾನಾಯಕನ ಪಟ್ಟವೊಂದು, ಅಷ್ಟೆ, ಪ್ರಕೃತಕ್ಕೆ.—ಅಬ್ಬ! ಏನು ಸೊಕ್ಕು? ಎಲ್ಲಿಯೋ ಬಿಟ್ಟಿಬೇಸಾಯ ಮಾಡುತ್ತಿದ್ದವನನ್ನು ತಂದು ಘನತೆಗೇರಿಸಿದುದಕ್ಕೆ ಇದುವೇ ಫಲ. ಕ್ರಮೇಣ ನನ್ನ ಎದೆಮೆಟ್ಟಿ ನಿಲ್ಲಲೂ ಬಹುದು . . .

ಅಹುದು. ಇವನಿಗೆ ನನ್ನಾಶ್ರಯಬೇಡ. ನನಗೇಕೆ ಇವನ ಸಹಾಯ? ಇವನಿನ್ನೇಕೆ ಜೀವಿಸುವುದು?—ಇವನನ್ನು ಕೊಲ್ಲುವುದು ಹೇಗೆಂದೇ ನಿನ್ನೆಯಿಂದ ಆಲೋಚನೆ! (ನಕ್ಕು) ಅಂತಹ ಶಿವಾಜಿಗೆ ಹೊಂಡ ತೆಗೆದವನು ನಾನು, ಈ ಸಾವಳ್ಯನಿಗಂಜುವುದೇ?—ಈ ಅರಣ್ಯದಿಂದ ಇವನು ಪಾರಾಗಬಾರದು. ಊಹು! ಪಾರಾಗುವಂತಿಲ್ಲ. ಇನ್ನೊಂದು ಆಹುತಿ ಈ ಯಜ್ಞಕ್ಕೆ . . . ಉಪಾಯವಿದೆ.

ನಮ್ಮ ಸಾಧು ಮಹಾರಾಜರನ್ನು ನೋಡಿ ಕಾರ್ಯಕ್ರಮವನ್ನು ನಿಶ್ಚಯಿಸಬೇಕು. ಬೇರೆಲ್ಲರ ಗತಿಯೇನಾದರೂ ತಾರೆಯನ್ನು ರಕ್ಷಿಸಬೇಕು. ಅದಕ್ಕೋಸ್ಕರವೇ ಪರ್ಣಶಾಲೆಯಿಂದ ಗುಪ್ತಮಾರ್ಗವಿಡಿಸಿದುದು; ಅದರ ಬಳಿಯಲ್ಲಿ ನನ್ನ ಕುದುರೆಯನ್ನೀಗ ನಿಲ್ಲಿಸಿದುದು . . .

ಓಹೋ! ನಾನೇ ಬೆಂಕಿ ಹಚ್ಚಿ ಈ ಯಜ್ಞಕುಂಡದಿಂದ ಪಾರಾಗಿ ಹೋಗಲಿಕ್ಕೆ ಬೇಕಾದಷ್ಟು ಸಮಯವಿದೆ.

ಆದರೆ, ಆದರೆ, ಎಲ್ಲ ವಿಷಯದಲ್ಲಿಯೂ ಆತುರತೆಯೇನೊ ಹೆಚ್ಚುತ್ತಿದೆ.—ಇರಲಿ; ಅವರನ್ನು ನೋಡುತ್ತೇನೆ. ಅಲ್ಲ! ಅದಕ್ಕಿಂತ ಮೊದಲು ಆ ಕಾರ್ಯವಾಗಬೇಕು.

---

## ದೃಶ್ಯ ೩

(ಜಾವಳಿಯ ಅರಣ್ಯದ ಗಡಿಯಲ್ಲಿ.
ಸುಗುಣನಾಯಕ, ನೇತಾಜಿ, ಮಾರೋಜಿ ಮತ್ತು ಸೈನಿಕರು ಪ್ರವೇಶಿಸುವರು.)

**ನೇ:**—ಭಾವ! ನೀವೆಲ್ಲರೂ ಇಲ್ಲಿಯೇ ತಂಗುವುದು. ನಾನು ಹೋಗಿ ಕಾರ್ಯವನ್ನು ಸಾಧಿಸುತ್ತೇನೆ.

**ಸು:**—ಅರ್ಧಾಂಶ ಸೈನ್ಯವನ್ನಾದರೂ ತೆಗೆದುಕೊಂಡು ಹೋಗು ಜತೆಯಲ್ಲಿ, ನೇತಾ!

**ನೇ:**—ಈಗ ಸೈನಿಕರಿಂದೇನು ಪ್ರಯೋಜನ? ಸೈನಿಕರಿದ್ದರೆ ಕಾರ್ಯ ಹಾನಿಯಾಗುವ ಸಂಭವವೇ ಹೆಚ್ಚಲ್ಲವೇ? ಈ ವಿಷಯವನ್ನು ತಿಳಿದೂ ನೀವು ಹೀಗೆನ್ನುವುದೇ?

**ಸು:**—ಆಗಲಿ, ನಾನೂ ನಿನ್ನ ಜತೆಯಲ್ಲಿಯೇ ಬರುತ್ತೇನೆ.

**ನೇ:**—ನೀವು ನಾಯಕರಲ್ಲವೇ? ಸೈನ್ಯದೊಡನೆ ನೀವು ಇಲ್ಲಿಯೇ ಇರಬೇಕು. ನಾನು ಮಾರೋಜಿಯನ್ನೂ ಇಬ್ಬರು ಸೈನಿಕರನ್ನೂ ಕರೆದುಕೊಂಡು ಹೋಗುತ್ತೇನೆ.

**ಸು:**—ಹಾಗಾದರೆ ಈ ಸೈನ್ಯವೇಕೆ? ಸೈನಿಕರು ಬೇಕೆಂದವನೂ ನೀನೇ! ಯುದ್ಧೋತ್ಸಾಹವಿರುವ ಸೈನಿಕರನ್ನು ಈಗ ಸುಮ್ಮನಿರುವಂತೆ ಹೇಳುವವನೂ ನೀನೇ!

**ನೇ:**—ಮಹಾರಾಜರು ಹೊರಟುಬರುವಾಗ ಸೈನ್ಯವಿಲ್ಲದಿದ್ದರೆ ಹೇಗೆ? ಆದರೆ ಆಶ್ರಮವನ್ನು ಹೊಗುವಾಗ ದೊಡ್ಡ ಸೈನ್ಯವನ್ನು

ತೆಗೆದುಕೊಂಡು ಹೋಗಬಾರದು. ಸಾಧುಗಳ ತಪೋಭಂಗವಾದೀತು. ಸಂದೇಹಕ್ಕೆಡೆಯಾದೀತು.

**ಮಾ:**—ನಾಯಕರೇ! ಈ ಮಾರೋಜಿಯ ದೇಹದಲ್ಲಿ ರಕ್ತಸಂಚಾರವಿರುವ ವರೆಗೆ ನನ್ನೊಡೆಯನ ಒಂದೇ ಒಂದು ರಕ್ತಬಿಂದು ಭೂಮಿಗುರುಳದು. ನಿಶ್ಚಿಂತರಾಗಿರಿ. ಆಶೀರ್ವದಿಸಿ ಕಳುಹಿಸಿರಿ.

**ಸು:**—ಹಾಗಾದರೆ, ನಾವು ಇಲ್ಲಿಯೇ ನಿಂತು ಏನುಮಾಡಬೇಕೆನ್ನುವುದು?

**ನೇ:**—ನಮ್ಮ ಕೆಲಸವು ನೆರವೇರದೆ-ಮೋಸವೇ ನಡೆದರೆ, ನಿಮಗೆ ತಿಳಿಯುತ್ತದಷ್ಟೆ. ಆಗ ಅರಣ್ಯದಲ್ಲಿರುವ ದ್ರೋಹಿಗಳನ್ನು ಸೆರೆಹಿಡಿಯಬೇಕು ಮೋಸಕ್ಕೆ ತಕ್ಕ ಪ್ರತೀಕಾರವನ್ನು ಮಾಡಬೇಕು. ಇನ್ನು ಮುಂದೆ ಅವರಿಂದ ಮಹಾರಾಜರಿಗೆ ಉಪದ್ರವವಾಗದಂತೆ ತಕ್ಕ ವ್ಯವಸ್ಥೆಯನ್ನು ಮಾಡಬೇಕು.

**ಸು:**—ನಮ್ಮ ಸೈನಿಕರನ್ನು ಈ ಮೊದಲೆ ಕಪಟವೇಷದಲ್ಲಿ ಅರಣ್ಯದ ಬೇರೆ ಬೇರೆ ಭಾಗಗಳಲ್ಲಿ ನಿಲ್ಲಿಸಿದ್ದೇನೆ. ದ್ರೋಹಿಗಳು ತಪ್ಪಿಸಿಕೊಂಡು ಹೋಗುವಂತಿಲ್ಲ, ನೇತಾ!

**ನೇ:**—ನಮ್ಮ ಕಾರ್ಯಸಾಧನೆಯಾಗುವಾಗ ಸೈನಿಕರ ಅವಶ್ಯಕತೆಯಿದ್ದರೆ ಒಂದು ಸಿಳ್ಳು ಹಾಕುತ್ತೇನೆ.

**ಸು:**—ನಾವು ಶುಭವನ್ನೇ ಪ್ರತೀಕ್ಷಿಸುವವರು.-ಹೋಗಿ ಬಾ, ಮಗೂ! ಯಶಸ್ವಿಯಾಗಪ್ಪ! (ನೇತಾಜಿ ನಮಸ್ಕರಿಸುತ್ತಾನೆ) ಜಯಶಾಲಿಯಾಗು! ಅಂಬಾಭವಾನಿ ನಿನ್ನನ್ನು ರಕ್ಷಿಸಲಿ.

**ನೇ:**—ಎಲ್ಲ ದೈವೇಚ್ಛೆ!

**ಸು:**—ಮಾರೋಜೀ, ಜೋಕೆ!-ಈ ದಿನ ನಿನ್ನ ರಕ್ಷಣೆಯಲ್ಲಿರುವ ನಮ್ಮ ನೇತಾಜಿ, ಮಹಾರಾಜರ ಮೆಚ್ಚಿನವನು. ಅವನನ್ನುಳಿಸಿದರೆ ಮಹಾರಾಜರಿಗೆ ಬಹಳ ಸಂತೋಷವಾಗುವುದು. ನಿನಗೆ ತಕ್ಕ ಪುರಸ್ಕಾರವೂ ದೊರೆವುದು.

**ಮಾ:**—(ನಮಸ್ಕರಿಸಿ)–ನೆಳಲಂತೆ ಅವರನ್ನನುಸರಿಸುತ್ತಿದ್ದವನು ನಾನು. ಇಂದೂ ಹೋಗುತ್ತೇನೆ. ದೇಹವಿದ್ದರೆ, ನೆಳಲುಂಟು. ಎಲ್ಲವೂ ನಿಮ್ಮ ಆಶೀರ್ವಾದ; ಜಗದಂಬೆಯ ಅನುಗ್ರಹ.

(ನೇತಾಜಿ, ಮಾರೋಜಿ, ಮತ್ತು ಇಬ್ಬರು ಸೈನಿಕರು ಹೋಗುತ್ತಾರೆ.)

**ಸು:**—ಹೇ! ಜಗದಂಬೆ! ಎಲ್ಲವೂ ನಿನ್ನ ಲೀಲೆ. ಹಲವು ಸಂಕಷ್ಟಗಳನ್ನು ತಂದೊಡ್ಡಿ ನಿನ್ನ ಭಕ್ತರನ್ನು ಪರೀಕ್ಷಿಸುತ್ತೀಯಲ್ಲವೇ? ಏನೋ? 'ಧರ್ಮಕ್ಕೆ ಚ್ಯುತಿಯಿಲ್ಲ'ದಿದ್ದರೆ, 'ಸತ್ಯಕ್ಕೆ ಜಯ'ವಾದರೆ ನೇತಾಜಿ ಯಶಸ್ವಿಯಾಗಲೇಬೇಕು. ನಿಷ್ಕಳಂಕ ಹೃದಯದ ತರುಣನವನು. ಮಹಾರಾಜರ ಮೇಲಣ ಅಪರಾಧವು ನಿರಾಧಾರವಾದುದೆಂದು ಪ್ರಸಿದ್ಧಿಯಾಗಬೇಕು. ದುಷ್ಟರ ನಿಗ್ರಹವಾಗಬೇಕು. ಹೇ! ಭವಾನಿ! ಭಕ್ತರನ್ನುದ್ಧರಿಸು; ಕಾಪಾಡು.

---

## ದೃಶ್ಯ ೪

(ಜಾವಳಿಯ ಅರಣ್ಯ. ಆಶ್ರಮ. ತಾರೆ, ರಘುನಾಥರಾಯ ಮತ್ತು ಖಂಡೋಜಿ ಇವರು ಕುಳಿತಿದ್ದಾರೆ)

**ಖಂ:**—ಏನು ಮಾವ, ತಾರೆ ಬಹಳ ವಿಚಾರಮಗ್ನಳಾಗಿದ್ದಾಳೆ?

**ರ:**—ಏನೋ, ಶಿವಾಜಿ ಈ ಹೊತ್ತು ಬರುತ್ತಾನೆಂಬುದನ್ನು ಕೇಳಿದಂದಿನಿಂದ ಅವಳ ಸ್ಥಿತಿ ಇದೇ.

**ಖಂ:**—(ಆತ್ಮಗತ) ನನ್ನದೂ ಹಾಗೆಯೇ! ನನ್ನ ಮನಸ್ಸು ಇಂದಿನವರೆಗೆ ಕಳವಳಗೊಂಡುದೆಂದು ಇಲ್ಲ. (ಪ್ರಕಾಶ) ಕಾರ್ಯಸಾಧನೆಯಾಗುವಾಗ ಇಂತಹ ಉತ್ಕಂಠೆ ಸಹಜವೇ. ಆದರೆ, ಇಂದು ಮಾತ್ರ ಸಾಧುಗಳ ಮುಖದಲ್ಲಿ ತೇಜಸ್ಸು ತುಂಬಿ ತುಳುಕಾಡಬೇಕು.

**ರ:**—ನೀನೇ ಹೇಳಿನೋಡು ಖಂಡ್ಯಾ; ಅವಳೇನೋ ಮೊನ್ನೆಯಿಂದ ಸರ್ವಸಂಗ ಪರಿತ್ಯಾಗಮಾಡಿದ ಮಹಾಯೋಗಿಯಂತೆಯೇ ಇದ್ದಾಳೆ.

**ಖಂ:**—ಅದರಿಂದ ದೋಷವಿಲ್ಲ; ಪ್ರಯೋಜನವೇ. ಹಾಗೆ ತೋರಿದರೆ, ಶಿವಾಜಿಯೂ ಅವನ ಪರಿವಾರದವರೂ ಯೋಗಿಗಳನ್ನು ಭಕ್ತಿ ಪುರಸ್ಸರವಾಗಿ ಪೂಜಿಸಿ ಪ್ರಸಾದಕ್ಕೆಂದು ಬಾಯಿತೆರೆದು ಕುಳಿತು ಕೊಳ್ಳುವರು.

**ರ:**—ಏನೋ, ಖಂಡೋಜಿ! ನನಗೇನೋ ಭೀತಿ ಹೆಚ್ಚುತ್ತಿದೆ. ನೀನೇ ಸುರಂಗಗಳನ್ನೆಲ್ಲಾ ನೋಡಿಬಂದೆಯಾ?

**ಖಂ:**—ಓಹೋ! ಎಲ್ಲಾ ಭಾಗಗಳಿಗೂ ಹೋಗಿ ಸಕಲಸಿದ್ಧತೆಗಳನ್ನೂ ನೋಡಿಬಂದೆನು. ಹೇಳಿದುದನ್ನೆಲ್ಲಾ 'ಚಾ ಚೂ' ತಪ್ಪದೆ ಸಾವಳ್ಯನು ನೆರವೇರಿಸಿದ್ದಾನೆ.

**ರ:**—ಪಾಪ! ಅವನ ಕಾರ್ಯದಕ್ಷತೆಯೇನು? ರಾತ್ರಿಯೆನ್ನದೆ ಹಗ ಲೆನ್ನದೆ ಅವನು ಮಾಡಿದ ಕೆಲಸವೇನು? ಅವನ ಸ್ವಾಮಿನಿಷ್ಠೆ ಹೊಗಳಿಕೆಗೆ ಯೋಗ್ಯವೇ!

**ಖಂ:**—(ಆತ್ಮಗತ) ಸ್ವಾಮಿನಿಷ್ಠೆ, ಅಬ್ಬ! ಸ್ವಪ್ರತಿಷ್ಠೆಗೋಸ್ಕರ–ಆಗಲಿ, ಇನ್ನಷ್ಟು ಹೊಗಳಲಿ; (ಪ್ರಕಾಶ) ಕೆಲಸವೆಲ್ಲ ಸಂಪೂರ್ಣವಾಗಿದೆ. ಬೆಳಕುಗಂಡಿಗಳನ್ನೆಲ್ಲಾ ರಾತ್ರಿಯಲ್ಲಿ ಮುಚ್ಚಿಸಿಯಾಯಿತು.

**ತಾ:**—ಯಜ್ಞಕ್ಕೆ ಇಂದೆ ಪೂರ್ಣಾಹುತಿಯಲ್ಲವೇ?

**ಖಂ:**—ನೀವು ಮಾಡಿಸಿದರೆ!

**ತಾ:**—ಆಗಲೇಬೇಕು. ಶಿವಾಜಿಯೂ ಅವನ ಅನುಚರರೂ ಬಂದ ಕೂಡಲೆ ನೀವೆಲ್ಲರೂ ಹೊರಟುಹೋಗಬಹುದು.

**ಖಂ:**—ಹಾಗೆಂದರೆ?

**ತಾ:**—ಅಂತ್ಯಕ್ರಿಯೆ ನನ್ನ ಕೈಯಿಂದಲೇ ಆಗಬೇಕು.

**ಖಂ:**—ಛೇ! ಛೇ! ಏಕೆ ನಾನಿಲ್ಲವೇ ಆ ಕೆಲಸಕ್ಕೆ?

**ತಾ:**—ಊಹು! ಆ ಕೆಲಸ ನನ್ನ ಪಾಲಿನದು. ಪೂರ್ಣಾಹುತಿ ನನ್ನ ಕೈಯಿಂದಲೇ ಸಲ್ಲಬೇಕು. ನನ್ನ ಪ್ರತಿಜ್ಞೆಯೇ ಹಾಗೆ.

**ಖಂ:**—ಅಯ್ಯೋ ತಾರೆ! ಅದೇನು ಅಷ್ಟು ಸುಲಭವೇ? ಅದಕ್ಕೆ ಬೇಕಾದ ಸ್ಥೈರ್ಯವು ನಿನಗೆಲ್ಲಿ? ಅಲ್ಲದೆ ಅದರಲ್ಲಿ ಅಪಾಯವೂ ಇದೆ

**ತಾ:**— ಅಪಾಯವೇ?— ಸ್ಥೈರ್ಯ! ನನ್ನ ಸ್ಥಿರತೆಯ ಪರೀಕ್ಷೆಯಾಗ ಲಿಲ್ಲವೇ? ಇನ್ನೂ?

**ಖಂ:**— (ಆತ್ಮಗತ) ಇನ್ನೂ ಚಲ! ಅಯ್ಯೋ! ಇದನ್ನು ನುಂಗಲಿಕ್ಕೂ ಅಲ್ಲ, ಉಗುಳಲಿಕ್ಕೂ ಅಲ್ಲ ಎಂಬ ಸ್ಥಿತಿಯಾಯಿತಲ್ಲ, ನನ್ನದು! (ಪ್ರಕಾಶ) ಆಗಲಿ, ಶಿವಾಜಿ ಬಂದಾಗ ಆದರೋಪಚಾರಗಳನ್ನು ಮಾವಯ್ಯನವರೇ ಮಾಡಲಿ. ಸಾಧುಮಹಾರಾಜರ ಶಿಷ್ಯೋತ್ತಮರು; ಶಿವಾಜಿಯನ್ನು ಆಮಂತ್ರಿಸಿದವರು.

**ರ:**— ಅಬ್ಬ! ಅವನ ಆ ತೀಕ್ಷ್ಣ ನೋಟವು ನನ್ನ ಹೃದಯವನ್ನು ಹೊಕ್ಕು ಎಲ್ಲಿ ನಮ್ಮ ಕಪಟಾಚರಣೆ ಬಯಲಾಗುತ್ತದೋ ಎಂಬ ಭಯವಾಗುತ್ತದೆ ನನಗೆ, ಅವನನ್ನು ನೋಡಿದಾಗ.

**ತಾ:**— ಛೇ! ಆದರೋಪಚಾರವೇ? ಯಾರಿಗೆ? ಅವನು ಬಂದ ಮೇಲೆ ಕಾಲವಿಳಂಬವಾಗಬಾರದು. ಹಕ್ಕಿ ಹಾರಿಹೋಗಬಹುದು.

**ಖಂ:**— ಅಯ್ಯೋ ತಾರೆ! ನಿನ್ನ ಅವಸರದಿಂದ ಕೆಲಸವೆ ಕೆಟ್ಟುಹೋಗ ಬಹುದಲ್ಲ!

**ತಾ:**— ಹೆದರಬೇಡ! ಅವರು ಬರುವಾಗಲೆ ಬೆಂಕಿಯ ಕೊಳ್ಳಿಯನ್ನು ಹಿಡಿದಿರುತ್ತೇನೆ.

**ಖಂ:**— ಅವರು ಓಡಿ ಹೋದರೆ?

**ತಾ:**— ಓಡಿಹೋಗುವುದೇ? ಇಷ್ಟು ವಿಸ್ತಾರವಾಗಿ ಬೀಸಿದ ಬಲೆಯಿಂದಲೂ? ಎಷ್ಟು ಶೀಘ್ರವಾಗಿ ಕೆಲಸವನ್ನು ತೀರಿಸುತ್ತೇನೆಂಬುದನ್ನು ದೂರ ನಿಂತುಕೊಂಡು ನೋಡು. ಓಡುವುದು! ಭಯಗೊಂಡು ಓಡಬೇಕು; ಆಗ ಭಸ್ಮವಾಗಬೇಕು; ನನಗೆಷ್ಟು ಆನಂದವಾದೀತು?

**ಖಂ:** — ಇದು ಅಸಾಧ್ಯ ತಾರೆ! ಇಲ್ಲಿ ಬೆಂಕಿ ಕೊಟ್ಟರೆ ಆಶ್ರಮದ ಅಡಿಯಲ್ಲಿರುವ ಮದ್ದಿನ ಮೂಟೆಗೆ ಬೆಂಕಿ ತಗಲಲಿಕ್ಕೆ ಕಾಲುಗಳಿಗೆಯಾದರೂ ಬೇಡವೆ?

**ತಾ:**— ಅಯ್ಯೋ! ಅಷ್ಟು ಹೊತ್ತೇಕಪ್ಪಾ?

**ಖಂ:**— ಸರಂಜಾಮಿಯನ್ನು ಅಷ್ಟು ಉದ್ದವಾಗಿಟ್ಟಿದೆ. ಇಲ್ಲವಾದರೆ ನಾವು ಇಲ್ಲಿಂದ ಪಲಾಯನ ಮಾಡುವುದು ಹೇಗೆ?

**ತಾ:**— ಓಹೋ! ಹಾಗಾದರೆ ನಾನು ಮದ್ದಿನ ಮೂಟೆಗೆಯೇ ಬೆಂಕಿ ಹಚ್ಚುತ್ತೇನೆ. ಅವರು ಆಶ್ರಮವನ್ನು ಪ್ರವೇಶಿಸಿದೊಡನೆ ಪ್ರಾಣದಾಶೆಯುಳ್ಳವರು ಪಲಾಯನ ಮಾಡಬಹುದು.

**ಖಂ:**— ನೀನು?

**ತಾ:**— ನನ್ನ ವಿಚಾರ ನಿನಗೇಕೆ?

**(ಖಂ; ರ):**— ತಾರೇ! ಏನಿದು? ನಿನ್ನ ಬುದ್ಧಿ ವಿಕಾರಗೊಂಡಿದೆಯೇ?

**ತಾ:**— ಬುದ್ಧಿ ತೀಕ್ಷ್ಣವಾಗಿದೆ. ನನ್ನ ಪ್ರತಿಜ್ಞೆ ನೆರವೇರಿದ ಮೇಲೆ ನಾನು ಜೀವಿಸುವುದೇಕೆ?

**ಖಂ:**— ಏನು, ಶಿವಾಜಿಯನ್ನು ಕೊಂದರೆ ನಿನ್ನ ಕಾರ್ಯವಾಯಿತೇ?

**ತಾ:**— ಪಿತೃಋಣವನ್ನು ಪರಿಹಾರ ಮಾಡಿದಂತಾಯಿತು.

**ರ:**— ಮಗೂ! ನಮ್ಮ ನಾಡಿನ ಗತಿಯೇನು? ನಮ್ಮ ಸದ್ವಂಶವೆ ನಿರ್ಮೂಲವಾಗುವುದಲ್ಲ, ತಾರೆ! ನೀನು ಇನ್ನೂ ತರುಣಿ. ಎಷ್ಟೋ ಸುಖೋಪಭೋಗಗಳನ್ನು ಅನುಭವಿಸಲಿಕ್ಕಿದೆ. ಸುಮ್ಮನೆ ನಿರಾಶಳಾಗಬೇಡ.

**ತಾ:**— ಆಶೆಯಿದ್ದರಲ್ಲವೆ ನಿರಾಶೆಗೊಳ್ಳುವುದು! ನನ್ನ ಆಶೆಗೆ ತಿಲಾಂಜಲಿಯನ್ನಿತ್ತೆ ಪ್ರತೀಕಾರ ಯಜ್ಞಕ್ಕೆ ಬದ್ಧಕಂಕಣಳಾದುದು.

**ಖಂ:**— ಏನೋ, ಯೋಗಿಯಂತೆ ನಟಿಸಿಕೊಂಡಿದ್ದು ಸ್ವಲ್ಪ ಬುದ್ಧಿ ಭ್ರಂಶವಾಗಿದೆ.

**ರ:**— ಪಾಪ! ಮೊನ್ನೆಯಿಂದ ಉಪವಾಸವೇ ಇದ್ದಾಳೆ. ನಿನ್ನೆ ರಾತ್ರಿ ಬಹಳ ಒತ್ತಾಯಿಸಿ ಒಂದು ಹಣ್ಣನ್ನೂ ಸ್ವಲ್ಪ ಹಾಲನ್ನೂ ತೆಗೆದುಕೊಳ್ಳುವಂತೆ ಮಾಡಿದೆನು. ನಿತ್ರಾಣದ ಪರಿಣಾಮವಿದು.

**ಖಂ:**— ಕ್ರಮೇಣ ಅದಕ್ಕೆ ತಕ್ಕ ಚಿಕಿತ್ಸೆ ಮಾಡೋಣ.—ತಾರೆ! ಕೆಲಸವನ್ನು ಕೆಡಿಸಬೇಡ. ಶಿವಾಜಿ ಬರುವಾಗ ನೀನು ಸಮಾಧಿಯಲ್ಲಿದ್ದಂತೆ ಸುಮ್ಮನಿರು; ಮೌನವಾಗಿರು. ಮಾವಯ್ಯನವರು ಎಲ್ಲವನ್ನೂ ಸರಿಗೊಳಿಸುವರು.

**ತಾ:**—ಪಾಪ!—ಅವರು ನಿರಪರಾಧಿ! ಅವರೇಕೆ ಬಲಿಯಾಗಬೇಕು? ಇನ್ನು ಅವರಿಷ್ಟ; ನನಗೇನು?

**ರ:**—ತಾರೇ! ಹೀಗೂ ಇದೆಯೇ? ಖಂಡೋಜಿಯನ್ನು ಮದುವೆಯಾಗಿ ನಮ್ಮ ನಾಡಿನ ರಾಣಿಯಾಗಿ ಮೆರೆ! ಉತ್ಸಾಹಭರಿತಳಾಗು, ಮಗು!

**ತಾ:**—ಚಿಕ್ಕಪ್ಪ! ನೀವೂ ಹೀಗೆನ್ನುವುದೇ? ನಾಡು–ನಾಡೆಲ್ಲಿದೆ? ಇನ್ನಿರುವುದು ಕಾಡು–ಶ್ಮಶಾನ. ಈ ದುಷ್ಟನು ತನ್ನ ಕ್ರೌರ್ಯದಿಂದಲೂ ನಿರ್ದಯಸ್ವಭಾವದಿಂದಲೂ ಪ್ರಜೆಗಳೆಲ್ಲರನ್ನು ಓಡಿಸಿದ್ದಾನಷ್ಟೆ! ಅಲ್ಲಿ ಅವನು ರಾಜ, ನಾನು ರಾಣಿ–ಆಹಾ! ಹಾ!

**ಖಂ:**—ಅಯ್ಯೋ, ತಾರೇ! ನಾನು ಮಾಡಿದುದೆಲ್ಲವೂ ನಿನ್ನ ಹಿತದೃಷ್ಟಿಯಿಂದ.

**ತಾ:**—ಇರಬಹುದು. ಆದರೆ ನನ್ನ ಹಿತದೃಷ್ಟಿಯಿಂದಾದುದು ಪ್ರಜೆಗಳ ಪೀಡೆಯಲ್ಲವೇ? ನನಗೆ ರಾಜ್ಯವೂ ಬೇಡ, ನನ್ನಿಂದಾಗಿ ಪ್ರಜೆಗಳು ಗೋಳಿಡುವುದೂ ಬೇಡ. ನನ್ನ ಸುಖ, ಪ್ರಜೆಗಳ ಸಂಕಟ!

**ರ:**—ತಾರೇ! ಕೆಲವರು ರೈತರು ಬಂದು ಖಂಡೋಜಿಯನ್ನು ದೂರಿದರೆಂದು ನೀನು ಒಮ್ಮಿಂದೊಮ್ಮೆ ಈ ಸಂಕಲ್ಪವನ್ನು ಮಾಡುವುದೇ?

**ಖಂ:**—ಅಲ್ಲದೆ, ಮಾವ! ಹಿರಿಯಮಾವಯ್ಯನವರ ದುಂದುಗಾರಿಕೆಯಿಂದ ಖಜಾನೆ ಮೊದಲೇ ಬರಿದಾಗಿದೆ. ಈ ನಮ್ಮ ಸಿದ್ಧತೆಗಳಿಗೆ, ಇನ್ನು ಮುಂದೆ ಆ ಶಿವಾಜಿಯೊಡನೆ ಯುದ್ಧವಾಗಬೇಕಾದರೆ ಅದಕ್ಕೆ, ಬೇಕಾದುದು ಹಣ. ಹಣವೆಲ್ಲಿಂದ ಬರುವುದು? ಕಂದಾಯವನ್ನು ಹೊರಿಸಿ ಅದನ್ನೆತ್ತುವುದಕ್ಕೆ ಜನರನ್ನು ಅಲ್ಪಸ್ವಲ್ಪ ಗದರಿಸಿದುದು ನಿಜ.

**ತಾ:**—ಪ್ರಜೆಗಳಲ್ಲನೇಕರು ಅಲ್ಪಸ್ವಲ್ಪ ಹೆದರಿ ಓಡಿಹೋದುದೂ ನಿಜ.

**ರ:**—ತಾರೇ! ಹಾಗೆ ಯಾರಿಗಾದರೂ ಅನ್ಯಾಯವಾಗಿದ್ದರೆ ಅದನ್ನು ವಿಚಾರಿಸಿ, ಅವರಿಗೆ ತಕ್ಕ ಪ್ರತಿಫಲವನ್ನು ಕೊಟ್ಟು ಹಿಂದೆ ಕರೆತರಬಹುದು. ಅನ್ಯಾಯವಾಗಬೇಕೆಂದು ಬಯಸುವವನೇ ನಮ್ಮ ಖಂಡೋಜಿ!

**ಖಂ:**—ಏನು ಮಾಡುವುದು? ಎಷ್ಟೋ ಗಹನಕಾರ್ಯಗಳು ಆಗಬೇಕಾದುದು ನನ್ನೊಬ್ಬನಿಂದ! ಒಂದು ವೇಳೆ ಅಧಿಕಾರಿಗಳು ಅನ್ಯಾಯಮಾಡಿದ್ದರೂ ಇರಬಹುದು. ಅದು ಋಜುವಾಗಲಿ; ಅವರನ್ನು ಆಗ ಹೇಗೆ ದಂಡಿಸುವೆನೆಂಬುದು ತಿಳಿವುದು-

**ತಾ:**—ಚಿಕ್ಕಪ್ಪ! ಇನ್ನು ನೀವೇ ರಾಜರಾಗಬಹುದು. ನ್ಯಾಯಾನ್ಯಾಯವನ್ನು ವಿಮರ್ಶಿಸಿ ಅನ್ಯಾಯಗಾರರಿಗೆ ತಕ್ಕ ಶಿಕ್ಷೆಯನ್ನು ವಿಧಿಸಬಹುದು. ಧರ್ಮದ ತಳಹದಿಯ ಮೇಲೆ ನಿಂತ ರಾಜ್ಯವೇ ಸ್ಥಾಯಿಯಾಗುವುದು ಎಂಬ ತತ್ವದ ನೆನಪಿರಲಿ. ಆದರೆ, ನನ್ನ ಐಹಿಕ ಸುಖವು ಕೊನೆಗೊಂಡಿತು. ಈ ವಿಷಯದಲ್ಲಿ ನನ್ನ ಸಂಕಲ್ಪವು ಸ್ಥಿರವಾದುದು. (ಪರ್ಣಶಾಲೆಯೊಳಗೆ ಹೋಗುವಳು)

**ಖಂ:**—ತಾರೆ! ಹೇ ತಾರೆ! ಆದರೆ, ಅವಸರಮಾಡಿದರೆ, ನಿನ್ನ ಪ್ರತಿಜ್ಞಾಭಂಗವಾದೀತು!—

ಇಲ್ಲ! ಹೊರಟೇ ಹೋದಳು.-ಮಾವ! ಈಗ ಸಕಲ ಭಾರವೂ ನಿಮ್ಮ ತಲೆಯ ಮೇಲೆ. ಶಿವಾಜಿಗೆ ಸಂಶಯಕ್ಕೆಡೆಗೊಡದೆ, ಅವನ ಮನವೊಲಿಸಿ, ಸಾಧುಮಹಾರಾಜರ ಆಶೀರ್ವಾದವನ್ನು ಪ್ರತೀಕ್ಷಿಸುತ್ತ ಭಕ್ತಿಯಿಂದ ಕುಳಿತುಕೊಳ್ಳುವಂತೆ ಮಾಡುವ ಕೆಲಸವು ನಿಮ್ಮದು.

**ರ:**—ಆಗಲಿ; ಪ್ರಯತ್ನಿಸುತ್ತೇನೆ—ಖಂಡ್ಯಾ! ನಮ್ಮ ವೆಂಕುವನ್ನು ಮೊದಲೇ ಊರಿಗೆ ಕಳುಹಿಸಬಹುದಲ್ಲವೇ?-ಪಾಪ! ಇಲ್ಲಿಯ ಭೀಕರ ಕೃತ್ಯಗಳನ್ನು ನೋಡಿದರೆ—

**ಖಂ:**—(ಆತ್ಮಗತ) ಈ ಮುದಿ ಕೋತಿಗೆ ವೆಂಕುವಿನ ಆಲೋಚನೆ! ಪಾಪ! (ಪ್ರಕಾಶ) ನಿಮ್ಮನ್ನು ಅವಳು ಬಿಟ್ಟು ಹೋಗುವಳೆಂದು ವಿಶ್ವಾಸವಿಲ್ಲ.

**ರ:**—ಅಹುದು. ಅವಳ ಭಕ್ತಿ ಅಷ್ಟು ಗುರುತರವಾದುದು. ಆಗಲಿ, ನಾನೇ ಅವಳಿಗೆ ಬುದ್ಧಿವಾದವನ್ನು ಹೇಳಿ ಬರುತ್ತೇನೆ. ಇಲ್ಲಿದ್ದರೆ ಅಪಾಯವಿದೆಯೆಂದು ಮುಂದಟ್ಟುಮಾಡಿ ಅವಳನ್ನು ಕಳುಹಿಸಿ ಬರುತ್ತೇನೆ . . . ಸಾವಳ್ಯನೆಲ್ಲಿ?

**ಖಂ:**—(ನಕ್ಕು) ಮಾವ! ಈ ಕೆಲಸವನ್ನೆಲ್ಲ ನಾನೇ ಮಾಡುವುದಿಲ್ಲವೇ? ನೀವು "ನಿಮ್ಮ ಗುರುಗಳ, ಯೋಗೀಶ್ವರರ" ಮನಸ್ಸನ್ನು ಬದಲಾಯಿಸಲಿಕ್ಕೆ ಪ್ರಯತ್ನಿಸಿ, ಮಾವ!

**ರ:**—ವೆಂಕುವನ್ನು ಕಳುಹಿಸಿಕೊಟ್ಟು ಆ ಮೇಲೆ ಪ್ರಯತ್ನಿಸುತ್ತೇನೆ.

**ಖಂ:**—ಛೆ! ಮಾವ! ಇನ್ನು ಸಮಯವೆಲ್ಲಿದೆ? ವೆಂಕುವಿನ ಆಲೋಚನೆಯೇ ಬೇಡ ನಿಮಗೆ. ಸಾವಳ್ಯನಿಗೂ ಇನ್ನು ಇಲ್ಲಿ ಕೆಲಸವಿಲ್ಲ, ಅವನ ಜತೆಯಲ್ಲಿಯೇ ಕಳುಹಿಸುತ್ತೇನೆ ಅವಳನ್ನು.

**ರ:**—ಆದರೆ, ಖಂಡ್ಯಾ! ಮರೆಯಬೇಡ. ಒಂದು ವೇಳೆ ನನ್ನನ್ನು ಬಿಟ್ಟು ಊರಿಗೆ ಹೋಗಲು ಒಪ್ಪದಿದ್ದರೆ ಅವಳನ್ನೊಂದು ಸುರಕ್ಷಿತವಾದ ಸ್ಥಳದಲ್ಲಿಯಾದರೂ ನಿಲ್ಲಿಸು. ಜೋಕೆ! (ಹೋಗುತ್ತಾನೆ.)

**ಖಂ:** (ಆತ್ಮಗತ) ಅಯ್ಯೋ! ಗ್ರಹಚಾರವೇ! "ಕೈಗೆ ಬಂದ ತುತ್ತು ಬಾಯಿಗಿಲ್ಲ" ಎಂಬ ಗತಿಯಾಯಿತಲ್ಲ! ತಾರೆಯೇನೋ ಬಹಳ ಕಾತರಳಾದಂತಿದೆ! ಮನಸ್ಸು ಪರಿವರ್ತನೆಯಾಗುವ ಲಕ್ಷಣವೂ ಇಲ್ಲ. ಅಯ್ಯೋ! ಚಂಚಲೆಯರನ್ನು ನಂಬಿ ಇಂತಹ ಕಾರ್ಯಕ್ಕೆ ಕೈಹಚ್ಚಬಾರದು.

ಹೂಂ! – ಈಗ ಉಪಾಯವೇನು? ತಾರೆಯನ್ನು ಇಲ್ಲಿ ನಾಶಹೊಂದಗೊಡಬಾರದು! – ಇವಳಿಲ್ಲದೆ ನಾನು ವಿಶಾಲಗಡಕ್ಕೆ ಹೋಗುವುದೆಂತು? ನನಗಲ್ಲೇನಧಿಕಾರ?

(ಸಿಟ್ಟುಗೊಂಡು)–ಶ್ವಾಪದವನ್ನು ಪಳಗಿಸುವ ಇವಳನ್ನು ಪಳಗಿಸುತ್ತೇನೆ. ನಯದಿಂದ ಒಲಿಯದುದನ್ನು ಭಯದಿಂದ ಮುರಿಯುತ್ತೇನೆ. –ಏನು? ಈ ಖಂಡೋಜಿಯನ್ನು ಇದಿರಿಸುವ ಧೈರ್ಯವೇ ನಿನಗೆ?

---

## ದೃಶ್ಯ ೫

(ಸುರಂಗದ ಒಂದು ಮೂಲೆಯಲ್ಲಿ.
ಸಾವಳ್ಯನು ನರಳುತ್ತಿದ್ದು ಮೆಲ್ಲನೆ ಎದ್ದು)

**ಸಾ:—(ಆತ್ಮಗತ)** ಅಯ್ಯೋ! ನಿಲ್ಲುವಾಗ ತಲೆತಿರುಗುತ್ತದೆ; ಕಣ್ಣು ಕತ್ತಲೆ ಹೋಗುತ್ತದೆ. ಅಬ್ಬ! ಏನು ಮೋಸ,—ಮೋಸ! ಮೋಸವೆಂದು ನಾನೂ ದೂರುವುದೇ? ನಾನು ಇಂದಿನ ವರೆಗೆ ಮಾಡುತ್ತಿದ್ದುದೇನು? ಮೋಸ; ದ್ರೋಹ!-ಆದರೆ, ಅಯ್ಯೋ! ನಾನು ಮಾಡಿದುದೇ? ಅಲ್ಲ; ಆ ದುಷ್ಟನು ನನ್ನಿಂದ ಮಾಡಿಸಿದುದು.

ಆಶೆ, ದುರಾಶೆ! ನಿನ್ನ ಬಂಧನದಲ್ಲಿ ಸಿಕ್ಕಿದೆನಲ್ಲವೇ? ಎಂತಹ ಹೇಯಕೃತ್ಯಗಳನ್ನು ಮಾಡಿದೆನು! ಈ ಮೊದಲು ನೇತಾಜಿಯನ್ನು ಕೊಲ್ಲಲಿಕ್ಕೆ ಒಮ್ಮೆ ಪ್ರಯತ್ನಿಸಿಯಾಯಿತು. ದೇವರ ದಯೆಯಿಂದ ಬದುಕಿದನವನು. ಆಗ ನಾನು ಮಾಡಿದುದು ಮೋಸವಲ್ಲವೇ? ಇನ್ನು ನಮ್ಮ ರಾಯರ ವಿಷಯದಲ್ಲಿ ... ಅಯ್ಯೋ, ದ್ರೋಹ! ದ್ರೋಹವನ್ನು ಮಾಡಿದ ಪಾಪಿ! ಎಲ್ಲವನ್ನೂ ಮಾಡಿದುದು ಆ ಕೃತಘ್ನನಿಗೋಸ್ಕರ!—ದೇವರೇ! ನನ್ನನ್ನೇಕೆ ಉಳಿಸಿದೆ? ಪರಮ ಮಿತ್ರನಂತೆ ನಟಿಸುತ್ತಿದ್ದ ಆ ದುಷ್ಟನ, ಆ ಪಾಪಿಯ ಕೈಯಿಂದ ದುರ್ಮರಣವೇ ನನಗೆ ತಕ್ಕ ಪ್ರಾಯಶ್ಚಿತ್ತವಲ್ಲವೇ?

ಅಬ್ಬ! ಆ ಮಾತು, ಈ ಮಾತು ಎಂದು ಎಷ್ಟು ಸುಲಭದಲ್ಲಿ ನನ್ನನ್ನು ಮೋಸಗೊಳಿಸಿದನವನು? ನಾನು ಬಗ್ಗಿದಾಗಲೇ ಈ ಮಗ್ಗುಲಿಗೆ ತನ್ನ ಕಠಾರಿಯಿಂದ ತಿವಿದನಲ್ಲ! ಒಂದೇಟು ಹೊಡೆದುದೆಂದರೆ ನಾನು ಮೂರ್ಛಿತನಾಗಿ ಬಿದ್ದುದೇ! ಅಬ್ಬ! (ಸಿಕ್ಕಿರುವ ಕಠಾರಿಯನ್ನೆಳೆದು) ಈ ಕಠಾರಿ! ಉಕ್ಕಿನ ಕವಚವಿದ್ದುದರಿಂದಲೆ ಬದುಕಿದೆ!

ಅವನ ಹೇಳಿಕೆಯಂತೆ ಒಂದೂ ಬಿಡದೆ ಮಾಡುತ್ತಿದ್ದೆ. ಹಜ್ಜೆ ಹಜ್ಜೆಗೂ ಅವನು ಹೇಳುತ್ತಿದ್ದುದೇನು? ಹೂಂ! ತನ್ನ ಕೆಲಸವು ಕೈಗೂಡಿತು ಅವನಿಗೆ. ಅಯ್ಯೋ! ನನ್ನ ದುರಾಶಾಪೂರ್ತಿಗಾಗಿ ನನ್ನ

ತಂಗಿಯನ್ನು ಬಲಿಗೊಟ್ಟೆನಲ್ಲವೇ? ಅವಳ ಸುಖವನ್ನು ಮಣ್ಣುಗೂಡಿಸಿದೆನಲ್ಲವೇ? ಹೇ, ವೆಂಕೂ! ನಾವು ಒಂದೇ ತಾಯ ಹೊಟ್ಟೆಯಲ್ಲಿ ಹುಟ್ಟಿದವರಾದರೂ ನಾನು ನಿನಗೆ ಅಮಂಗಲವನ್ನು ಬಯಸಿದೆನು. ನನ್ನನ್ನು ಕ್ಷಮಿಸು, ತಂಗೀ! (ಅಳುತ್ತಾನೆ)

ಹೇ, ದೇವಾ! ನನ್ನನ್ನುಳಿಸಿದುದೇಕೆ? ನನ್ನ ಪಾಪಕೂಪವು ತುಂಬಲಿಲ್ಲವೇ? ಛೀ! ಅಲ್ಲ! ಇನ್ನಾಗುವ ಕೊಲೆಯನ್ನು ತಪ್ಪಿಸಬೇಕು; ಖಂಡೋಜಿಯ ದುರುದ್ದೇಶವು ಬಯಲಾಗಬೇಕು; ತಾರೆಯ ರಕ್ಷಣೆಯಾಗಬೇಕು. ಹೂಂ, ಇದಕ್ಕೋಸ್ಕರವೆ ನನ್ನನ್ನುಳಿಸಿದುದು; ನಿಜ!

ಆದರೆ, ಅವನಿಗೀಗ ಕಾಣಿಸಿಕೊಳ್ಳಬಾರದು. ಇಲ್ಲಿಯೇ ಇದ್ದು ಸಮಯವನ್ನು ಸಾಧಿಸಬೇಕು.

---

## ದೃಶ್ಯ ೬

(ಜಾವಳಿಯ ಅರಣ್ಯ. ಆಶ್ರಮ. ರಘುನಾಥರಾಯನು ಯಜ್ಞಕುಂಡದಿದಿರಲ್ಲಿದ್ದಾನೆ. ತಾರೆ ಪರ್ಣಶಾಲೆಯೊಳಗೆ ಇದ್ದಾಳೆ. ಖಂಡೋಜಿ ಸಮೀಪದಲ್ಲಿಯೇ ಅಡಗಿದ್ದಾನೆ. ನೇತಾಜಿ ಮೊದಲಾದವರು ಪ್ರವೇಶಿಸುತ್ತಾರೆ.)

**ರ:**— ಓಹೋ! ಹೀಗೆ ಬರಬೇಕು. ಇಲ್ಲಿ ಮಂಡಿಸಬೇಕು. (**ನೇತಾಜಿ ಮೊದಲಾದವರು ನಮಸ್ಕರಿಸುತ್ತಾರೆ.**) ರಾಜಾ! ದೀರ್ಘಾಯುಷ್ಮಂತನಾಗು. ಅಂಬಾಭವಾನಿ ನಿಮಗೆಲ್ಲರಿಗೂ ಮಂಗಳವನ್ನುಂಟು ಮಾಡಲಿ-ಶುಭಾಗಮನವೇ?

**ನೇ:**— ಮಹಾತ್ಮರ ಆಶೀರ್ವಾದ ಮತ್ತು ಅನುಗ್ರಹ.

**ರ:**— ಸಾಧುಸಂತರಲ್ಲಿ ನಿಮಗಿರುವ ಭಕ್ತಿಗೌರವಗಳನ್ನು ತಿಳಿದು ಗುರುಮಹಾರಾಜರು ಆನಂದಿಸಿದ್ದಾರೆ.

**ನೇ:**— ಮಹಾತ್ಮರ ಸದ್ಧರ್ಮ ಪ್ರಭಾವದಿಂದಲೇ ಲೋಕವು ನಡೆಯುತ್ತಿದೆ.

**ರ:**— ಧರ್ಮವನ್ನು ಪರಿಪಾಲಿಸುವ ಪ್ರಭುಗಳಿಂದಾಗಿ ಸಾಧುಸಂತರು ಸುಖವಾಗಿರುತ್ತಾರೆ.

**ನೇಃ**—ಅವರಿಗೆ ಸುಖದುಃಖವೆಂದರೇನೋ? ನಾವು ನಮ್ಮ ಮಂದ ಮತಿಗನುಸಾರವಾಗಿ ಅವರು ಸುಖವಾಗಿರಬೇಕೆಂಬ ಪ್ರವೃತ್ತಿ ಸುತ್ತೇವೆ.

**ರಃ**—ನಿರ್ವಿಘ್ನವಾಗಿ ತಪಸ್ಸು ಮಾಡಲು ಅನುವು ದೊರೆತರೆ ಯೋಗಿಗಳಿಗೆ ಸುಖ. ಆ ತಪಃಪ್ರಭಾವದಿಂದ ಲೋಕಕಲ್ಯಾಣವಾಗುವುದು.

**ನೇಃ**—ಎಲ್ಲವೂ ನಿಮ್ಮ ಆಶೀರ್ವಾದ ಪ್ರಭಾವ! ಸ್ವಾಮಿಗಳು ಆಹ್ನಿಕದಲ್ಲಿದ್ದಾರೋ?

**ರಃ**—ಅವರ ಸಮಾಧಿಯಿಳಿವ ಕಾಲವಾಯಿತು. ಅವರ ಸಮಯವನ್ನು ವಿಚಾರಿಸಿ ಬರುತ್ತೇನೆ. (ಒಳಗೆ ಹೋಗಿ, ತಾರೆಯೊಡನೆ ಹೊರಗೆ ಬರುತ್ತಾನೆ. ಎಲ್ಲರೂ ನಮಸ್ಕರಿಸುತ್ತಾರೆ.)

**ತಾಃ**—(ಆಶೀರ್ವದಿಸಿ) ಮಹಾರಾಜನಿಗೆ ಸುಖಾಗಮನವೇ? ಅಂಬಾಭವಾನಿಯ ಕೃಪಾಕಟಾಕ್ಷದಿಂದ-(ಆತ್ಮಗತ) ಹಾ! ಇದಾರು? ನೇತಾಜಿ ನಾಯಕರಲ್ಲವೇ? (ಬೆರಗಾಗುತ್ತಾಳೆ)

**ನೇಃ**—ಏನು ಪ್ರಭೋ! ಒಮ್ಮಿಂದೊಮ್ಮೆ ಚಕಿತರಾದಿರಿ?

**ತಾಃ**—ನಮ್ಮಲ್ಲಿಯೂ ಮೋಸವನ್ನು ಸಾಧಿಸುವುದೇ?—ಏನು? ನೀನು ಶಿವಾಜಿಯೋ? ಶಿವಾಜಿಯೆಂದು ಹೇಳಿ ನಮ್ಮನ್ನು ವಂಚಿಸಲೆಳಸಿದೆಯಾ?

**ನೇಃ**—ವಂಚನೆಯೆಲ್ಲಿಂದ? ನಾನು ಮಹಾರಾಜರ ಕಡೆಯವನು.

**ತಾಃ**---ನಮ್ಮ ಭೇಟಿಯನ್ನಪೇಕ್ಷಿಸಿದವನು ನಿನ್ನ ಮಹಾರಾಜನು; ನೀನಲ್ಲ.

**ನೇಃ**— ತಮ್ಮ ಅನುಕೂಲತೆಯನ್ನು ತಿಳಿದು ಬರುವಂತೆ ಮಹಾರಾಜರೇ ನನ್ನನ್ನು ಕಳುಹಿಸಿದರು. ಅವರು ಇಲ್ಲಿಯೇ, ಅರಣ್ಯದ ಹೊರಗೆ ಪರಿವಾರ ಸಮೇತರಾಗಿ ತಂಗಿದ್ದಾರೆ.

**ತಾ:**—ಇಂದು ನಾವು ಬೇರೆ ಯಾರನ್ನೂ ನೋಡುವುದಿಲ್ಲ; ಶಿವಾಜಿ ಬೇಕಾದಾಗ ಬರಬಹುದೆಂದು ಹೇಳಿರಲಿಲ್ಲವೇ?

**ನೇ:**—ಅಪ್ಪಣೆ-ಈಗಲೆ ಅವರನ್ನು ಕರೆತರುತ್ತೇನೆ.

**ರ:**—ಬೇಗ ಬನ್ನಿ. ನಮ್ಮ ಗುರುಮಹಾರಾಜರು ಸಿಟ್ಟುಗೊಂಡರೆ ಮತ್ತೆ ಭೇಟಿಯಾಗಲಾರದು.

**ನೇ:**—ಸಿಟ್ಟೇಕೆ ಸ್ವಾಮಿ?

**ತಾ:**—ಸಿಟ್ಟೇ? ನೀವು ನಮ್ಮನ್ನು ಪರೀಕ್ಷಿಸಲಿಕ್ಕೆಂದು ಬಂದಿರೆಂದು ಸಿಟ್ಟು. ಶಿವಾಜಿ ಕುಹಕಿಯೆಂಬ ಮಾತು ಪ್ರತ್ಯಕ್ಷವಾಯಿತು.

**ನೇ:**—ಛೇ! ಪರೀಕ್ಷಿಸುವುದೇನನ್ನು? ಯೋಗಿಗಳ ಪ್ರಭಾವವು ಜನ ಜನಿತವಾಗಿದೆ. ಸಂದೇಹಕ್ಕೆ ಎಡೆಯೇ ಇಲ್ಲ.

**ರ:**—ಇರಲಿ; ಮಹಾರಾಜರು ಬೇಗ ಬರಲಿ. ನಮ್ಮ ಗುರುಗಳ ಸ್ವಭಾವವದು. ಬೇಸರಿಸಬೇಡಿ.

**ನೇ:**—ಆದರೆ ಇಂತಹ ದುಡುಕುತನವು ಸರ್ವಸಂಗಪರಿತ್ಯಾಗ ಮಾಡಿದಂತಹ ಯೋಗಿಗಳಲಿ ಶೋಭಿಸಲಾರದು.

**ತಾ:**—ವಿಶ್ವಾಸದಂತೆ ಫಲ! ದುರುದ್ದೇಶದಿಂದ ಬಂದವರಿಗೆ ಎಲ್ಲವೂ ವಿಪರೀತವಾಗಿ ತೋರಿದರೆ ವಿಚಿತ್ರವಲ್ಲ.

**ನೇ:**—ಏನೋ ದುರುದ್ದೇಶವಿದ್ದುದರಿಂದಲೇ ಈ ತೆರದ ಸಿಡುಕು ಸ್ವಭಾವ.

**ರ:**—ಏನಿದು? ಗುರುಗಳ ಮಾನಹಾನಿ!—ಛೇ! ಜಾಗ್ರತೆ! ಶಪಿಸಿ ನಿಮ್ಮನ್ನು ಸುಟ್ಟುಬಿಟ್ಟಾರು!

**ನೇ:**—ಓಹೋ! ಸುಡಲಿಕ್ಕೆ ಸಕಲ ಸಿದ್ಧತೆಗಳಾಗಿವೆಯೆಂಬುದನ್ನು ಬಲ್ಲೆನು—ಆದರೆ, ಶಾಪದಿಂದಲ್ಲ; ಕುತಂತ್ರದಿಂದ.

**ತಾ:**—(ಆತ್ಮಗತ) ಹಾ! ಏನು? ಗುಟ್ಟೆಲ್ಲ ಬಯಲಾಯಿತೆ? ನಾನಿಲ್ಲಿರಲಾರೆನು. ಇವರ ಮುಂದೆ ನನ್ನ ಎದೆ ಹೊಡೆದಾಡುತ್ತಿದೆ. ನನ್ನ ಧೈರ್ಯವಡಗಿತು.

(ಪ್ರಕಾಶ) ಶಿಷ್ಯೋತ್ತಮ! ಇವರನ್ನು ಆಶ್ರಮದಿಂದ ಹೊರಗೆ ಕಳುಹಿಸಿಬಿಡು. ಯಾರಿಗೂ ಇಂದು ಭೇಟಿ ದೊರೆಯಲಾರದು. (ಹಿಂದಿರುಗುತ್ತಾಳೆ).

**ನೇ:**—ಈಗ ದೊರೆತ ಭೇಟಿಯು ಪರಿಸಮಾಪ್ತಿಯಾಗಬೇಕಷ್ಟೆ! ಹೇ, ತಾರೇ! (ಚಕಿತಳಾಗಿ ನಿಲ್ಲುವಳು) ನಿನ್ನಲ್ಲಿ ಕೆಲವು ಮಾತುಗಳನ್ನಾಡಬೇಕೆಂದೇ ಬಂದವನು ನಾನು.

**ತಾ:**— ಯಾರು? ಯಾರನ್ನುದ್ದೇಶಿಸಿ ಮಾತನಾಡಿದೆ? (ರಘುನಾಥರಾಯನು ಪರ್ಣಶಾಲೆಯೊಳಗೆ ಹೋಗುತ್ತಾನೆ).

**ನೇ:**—ನಿನ್ನನ್ನೆ! ಸಂದೇಹವೇಕೆ? ನೀನು ಯಾವ ಸೋಗಿನಲ್ಲಿದ್ದರೂ ಈ ನೇತಾಜಿ ನಿನ್ನನ್ನು ಗುರುತಿಸಬಲ್ಲನು.

**ತಾ:**— ನೀವು ಯಾರನ್ನೋ ಉದ್ದೇಶಿಸಿ ಯಾರಲ್ಲಿಯೋ ಮಾತನಾಡು ವಂತಿದೆ.

**ನೇ:**— ಛೀ! ಹಾಗೇನಾದರೂ ಭ್ರಾಂತಿಯಾಗಲಿಲ್ಲ, ತಾರೆ!

**ತಾ:**—ಸ್ತ್ರೀವ್ಯಾಮೋಹದಲ್ಲಿ ಸಿಕ್ಕಿ ನಿಮ್ಮ ಬುದ್ಧಿ ಭ್ರಮಿಸಿರಬೇಕು.

**ನೇ:**— ಮೋಹಕ್ಕೊಳಗಾಗಿ ಕರ್ತವ್ಯವನ್ನು ಮರೆವವನಲ್ಲವೆಂದು ಈ ಮೊದಲೇ ಪ್ರತ್ಯಕ್ಷವಾಗಿದೆಯಷ್ಟೆ!

**ತಾ:**— ನಾನೂ ಹಾಗೆಯೇ! (ಅವನನ್ನು ಇದಿರಿಸಿ) ಮೋಹಕ್ಕೊಳಗಾಗು ವವಳಲ್ಲ. ಪ್ರತಿಜ್ಞೆಯನ್ನು ಮರೆವಂತಿಲ್ಲ.

**ನೇ:**— ಸಕಾರಣವಾದ ಪ್ರತಿಜ್ಞೆಯನ್ನು ಪರಿಪಾಲಿಸಲೇ ಬೇಕು.

**ತಾ:** ವಿಚಾರವಿಲ್ಲದೆ ಯಾರೂ ಪ್ರತಿಜ್ಞೆಯನ್ನು ಮಾಡುವುದಿಲ್ಲ.

**ನೇ:**—ವಸ್ತುಸ್ಥಿತಿಯ ಮರ್ಮವನ್ನರಿಯಲು ಪ್ರಯತ್ನವಿಲ್ಲದೆ ವಿಚಾರ ವಿದೆಯೆಂದರೆ ಹೇಗೆ ನಂಬುವುದು?

**ತಾ:**—ಮರ್ಮವೇ? ಮರ್ಮವನ್ನೆಲ್ಲ ಬಲ್ಲೆನು.

**ನೇ:**—ಇಲ್ಲ! ಹಾಗೆ ನಿನ್ನ ಭಾವನೆ, ಅಷ್ಟೆ!

**ತಾ:**—(ಆಲೋಚಿಸುತ್ತಾಳೆ)

**ನೇ:**—ತಾರೆ! ಯಾರಲ್ಲಿ ನಿನ್ನ ಪ್ರತೀಕಾರ? ಮಹಾರಾಷ್ಟ್ರದ ಅನಭಿಷಿಕ್ತ ಮಹಾರಾಜನಲ್ಲಿಯೇ?

**ತಾ:**—ನನ್ನ ತಂದೆಯನ್ನು ಅಪಮೃತ್ಯುವಿನ ಬಾಯಿಗೆ ತುರುಕಿಸಿದವ ನನ್ನು ಕೊಲ್ಲುವುದೇ ನನ್ನ ಪ್ರತಿಜ್ಞೆ.

**ನೇ.**— ಹಾಗಾದರೆ, ಕೊಂದವನು ಯಾರೆಂಬುದನ್ನು ನಿರ್ಣಯಿಸದೆ ಮುಡುಕುವುದೇ?

**ತಾ:**— ಕೊಂದುದು ಯಾರೇ ಆಗಲಿ; ಕೊಲ್ಲಿಸಿದವನು ಯಾರೆಂಬು ದನ್ನು ನಿಶ್ಚಯಿಸಿದ್ದೇನೆ. ಆ ಮೇಲೆ ಪ್ರತಿಜ್ಞಾಬದ್ಧಳಾಗಿದ್ದೇನೆ.

**ನೇ:**—ಛೀ! ಮಹಾರಾಜರ ಸೌಜನ್ಯವನ್ನೂ ಧರ್ಮಾಭಿಮಾನವನ್ನೂ ಸ್ವಜನಾನುರಾಗವನ್ನೂ ತಿಳಿಯದೆ ನೀನು ಹೀಗೆ ಮಾತಾಡುವೆ!

**ತಾ:**—ಆ ಸೋಗಿನಿಂದಲೇ ಕಾರ್ಯಜಾಣರು ರಾಕ್ಷಸಕೃತ್ಯಗಳನ್ನೆಸಗುವುದು.

**ನೇ:**—ನೀವೀಗ ಪ್ರಯತ್ನಿಸುವಂತೆ, ಅಲ್ಲವೇ?

**ತಾ:**—ಶಕ್ತಿಯಿಲ್ಲದಲ್ಲಿ ಯುಕ್ತಿ. ಮತ್ತೇನು ಮಾಡಬಹುದು?

**ನೇ:**—ಅಯ್ಯೋ! ಹೇಳಿದವರ ಮಾತನ್ನು ಕೇಳಿ ನೀನೂ ಹೀಗೆ ಊಹಿಸುವುದೇ?

**ತಾ:**—ಪ್ರತ್ಯಕ್ಷಕ್ಕೆ ಪ್ರಮಾಣವವಶ್ಯವಿಲ್ಲ.

**ನೇ:**—ದೃಷ್ಟಿಯೇ ಮಂದವಾಗಿರುವಾಗ ಪ್ರತ್ಯಕ್ಷವಾದುದೂ ವಿಶ್ವಸನೀಯವಲ್ಲ.

**ತಾ:**—ನನ್ನ ಮನೋವೇದನೆಯನ್ನು ನೀವರಿಯಿರಿ.

**ನೇ:**—ಅದೇಕೆ, ಹೀಗೆನ್ನುವೆ ತಾರೆ? ನಿನ್ನ ದುಃಖದ ಕಾರಣವೂ ತಿಳಿದಿದೆ. ಅದೇ ವೇದನೆ ನನ್ನ ಹೃದಯದಲ್ಲಿ ಅನುತಾಪವನ್ನುಂಟುಮಾಡುತ್ತಿದೆ. ನನ್ನ ಅಂತರಾತ್ಮವನ್ನು ನೀನು ತಿಳಿವ ಬಗೆ ಹೇಗೆ?

**ತಾ:**—ನಿಮಗೂ ಶಿವಾಜಿಯ ಕುತಂತ್ರಗಳ ಅರಿವಿಲ್ಲದಿರಬಹುದು. ರಾಜ್ಯಲೋಭದಿಂದ, ಪೂಜ್ಯರಾದ ನನ್ನ ತಂದೆಯವರನ್ನು ಕೊಲ್ಲಿಸಿದವನು ಅವನೇ.

**ನೇ:**—ಇನ್ನೂ ಅದೇ ಮಾತು. ಚಂದ್ರರಾಯರ ಮರಣದ ಕಾರಣವನ್ನು ತಿಳಿವುದಕ್ಕೋಸ್ಕರ ಮಹಾರಾಜರು ಮಾಡುತ್ತಿರುವ ಪ್ರಯತ್ನವು ಮತ್ತು ನಿನ್ನ ರಾಜ್ಯರಕ್ಷಣೆಗೋಸ್ಕರ ಅವರು ಮಾಡಿರುವ ಏರ್ಪಾಡು, ಇವನ್ನು ನೀನು ತಿಳಿದರೆ . . . . .

**ತಾ:**—ಓಹೋ, ಗೊತ್ತಿದೆ! ನಮ್ಮಲ್ಲಿಂದ ಕಂದಾಯವನ್ನು ಕೊಡದೆ ಹೋದ ರೈತರನ್ನು ಉತ್ತೇಜಿಸಿ ಅವರಿಗೆ ಆಶ್ರಯವನ್ನು ಕೊಟ್ಟುದು.

**ನೇ:**—(ನಕ್ಕು) ಅಬ್ಬ! ಆ ಖಂಡೋಜಿ ನಿನ್ನನ್ನು ಪೂರಾ ಮಂಕುಗೊಳಿಸಿದ್ದಾನೆ. ಅದಿರಲಿ—ನನ್ನ ಮಾತಿನಲ್ಲಿ ನಿನಗೆ ವಿಶ್ವಾಸವಿಲ್ಲವೇ?

**ತಾ:**— ಶಿವಾಜಿಯ ಪಕ್ಷವಹಿಸಿ ಮಾತನಾಡುವ ಮಾತುಗಳಲ್ಲೇ?

**ನೇ:**— ಪಕ್ಷವಹಿಸಿ ಆಡುವ ಮಾತುಗಳಲ್ಲ; ತಾರೇ! ಸತ್ಯವಾದ ಮಾತುಗಳು.

**ತಾ:**— ಮಾತುಗಳೇ ಬೇಡ. ಶಿವಾಜಿಯನ್ನು ಕೊಂದೇ ಪಿತೃಋಣ ಪರಿಹಾರ; ಪ್ರತಿಜ್ಞೆಯ ಪಾಲನೆ.

**ನೇ:**— ತಾರೆ! ಚಂದ್ರರಾಯರ ಮರಣಕ್ಕೆ ಮಹಾರಾಜರು ಕಾರಣ ವಲ್ಲದಿದ್ದರೆ?

**ತಾ:**— ನನ್ನ ಅಂತರಾತ್ಮವು ಶಿವಾಜಿಯ ದುಷ್ಕೃತ್ಯವನ್ನು ಉದ್ಘೋಷಿಸುತ್ತಿದೆ. ನನ್ನ ತಂದೆಯ ಆತ್ಮವು ಪ್ರತಿರಾತ್ರಿಯೂ ಕನಸಿನಲ್ಲಿ ನನ್ನನ್ನು ಎಚ್ಚರಿಸುತ್ತಿದೆ.

(ರಘುನಾಥರಾಯನು ಖಂಡೋಜಿಯನ್ನು ಕರೆದುಕೊಂಡು ಬರುತ್ತಾನೆ. ಪರ್ಣಶಾಲೆಯ ಬಾಗಿಲ ಬಳಿ ಇಬ್ಬರೂ ನಿಲ್ಲುತ್ತಾರೆ; ಇವರೊಳಗಿನ ಮಾತುಗಳನ್ನು ಕೇಳುತ್ತಾರೆ.)

**ಖಂ:**— (ಜನಾಂತಿಕ) ಓಹೋ! ಅವನೇ ನೇತಾಜಿ!–ಸರ್ವನಾಶ! ಇನ್ನು ನಾಲ್ಕು ಮಾತುಗಳಲ್ಲಿ ಅವಳು ಅವನ ವಶವಾಗುವಳು. ಅಯ್ಯೋ, ಪಾಪ!

**ನೇ:**— ಆಗಲಿ, ತಾರೆ! ನಿನ್ನ ಪ್ರತೀಕಾರ ಮಾರ್ಗವನ್ನೆಲ್ಲ ಬಲ್ಲೆನು. ಇಂದು ಮಹಾರಾಜರು ಇಲ್ಲಿಗೆ ಬಂದಿದ್ದರೆ ಅವರನ್ನು ಸುಟ್ಟು ಬಿಡಲಿಕ್ಕೆ ಸಕಲ ಸಿದ್ಧತೆಗಳಾಗಿವೆಯೆಂದು ಅರಿತಿದ್ದೇನೆ- ಅದರಲ್ಲಿಯೇ ನನ್ನನ್ನು ಸುಟ್ಟುಬಿಡು. ಮಹಾರಾಜರ ಪವಿತ್ರ ಕಾರ್ಯ ಸಾಧನೆಗೆ ಪ್ರಾಣವನ್ನರ್ಪಿಸಿದ ಪುಣ್ಯವಾದರೂ ನನ್ನ ಪಾಲಿಗೆ ಇರಲಿ.

**ತಾ:**— ನಾನು ಕಟುಕನ ವಂಶಸ್ಥಳಲ್ಲ!

**ಖಂ:**— (ಜನಾಂತಿಕ)– ಹೂಂ, ಆಯಿತು!

**ನೇ:**— ಆದರೆ, ತಾರೆ! ನಿನ್ನ ಪ್ರತೀಕಾರೇಚ್ಛೆ ಎಷ್ಟು ತೀವ್ರವಾದುದು! ಅದನ್ನು ನೆರವೇರಿಸುವ ದುರ್ಮಾರ್ಗವು ಎಷ್ಟು ಭೀಕರವಾದುದು!

**ತಾ:**— ಮೋಸಕ್ಕೆ ತಕ್ಕ ಮೋಸ!

**ಖಂ:**—(ಜನಾಂತಿಕ) ಹೂಂ, ಬಹಳ ಹೆದರಿ ಹೇಳುತ್ತಾಳೆ! ಆಯಿತು. ಅವಳನ್ನುದ್ಧರಿಸುವುದು ಇನ್ನು ಸಾಧ್ಯವಲ್ಲ.

**ನೇ:**—ಆಗಲಿ, ಈಗ ನಿಮ್ಮ ದುಷ್ಕೃತ್ಯವೆಲ್ಲ ತಿಳಿಯಿತಷ್ಟೆ. ಮಹಾರಾಜರ ಸೈನಿಕರೆಲ್ಲ ಈ ಅರಣ್ಯವನ್ನು ಮುತ್ತಿದ್ದಾರೆ. ಸಿಡಿಮದ್ದಿನ ಮೂಟೆಗಳನ್ನೆಲ್ಲ ಸ್ವಾಧೀನಪಡಿಸಿಕೊಂಡು ಸುರಂಗವನ್ನು ನೆಲಸಮಮಾಡುವರು.

**ತಾ:**—ಅಯ್ಯೋ, ಕೇಳಲಾರೆನು ಈ ಮಾತುಗಳನ್ನು! (ಒಂದು ಕಿವಿಗೆ ಕೈಹಿಡಿದು, ಆಲೋಚಿಸಿ)–ಇನ್ನೇನಾದರೂ ಉಪಾಯವನ್ನು ಸಾಧಿಸುವೆನು.

**ಖಂ:**—(ಜನಾಂತಿಕ) ಅಯ್ಯೋ! ನಾಲ್ಕು ತಿಂಗಳುಗಳ ಮಹಾಕಾರ್ಯವು ಹೀಗೂ ನಿಷ್ಫಲವಾಗಬೇಕೇ? ಈ ಗುಟ್ಟು ಇವನಿಗೆ ತಿಳಿದುದು ಹೇಗೆ?

**ರ:**—(ಜನಾಂತಿಕ) ಇನ್ನೇನು ಗತಿ, ಖಂಡ್ಯಾ! ನಮ್ಮನ್ನೆಲ್ಲ ಸೆರೆಹಿಡಿವರಲ್ಲವೆ? ನನಗೇಕೆ ಬೇಕಿತ್ತು ಈ ರಾಜ್ಯದ ಮೇಲಣ ಆಶೆ?

**ನೇ:**—ತಾರೇ! ಒಮ್ಮೆ ನನ್ನಲ್ಲಿ ಸಂಪೂರ್ಣ ವಿಶ್ವಾಸವನ್ನಿಟ್ಟು, ಇಗೋ ಈ ಉಂಗುರವನ್ನಿತ್ತೆ; ಆ ವಿಶ್ವಾಸವು ಅಚಲವಾದುದೆಂದೆ. ಆದರೆ ನಿನ್ನಲ್ಲಿದ್ದುದು ಪವಿತ್ರಪ್ರಣಯವಲ್ಲವೆಂದು ಇಂದು ಖಚಿತವಾಯಿತು. ಇಗೋ! ನಿನ್ನ ಉಂಗುರವನ್ನು . . . .

**ತಾ:**—(ಕಣ್ಣೀರು ಮಿಡಿದು)–ಅಲ್ಲ! ಅದು ಪವಿತ್ರಪ್ರಣಯುವೇ? ಅದರ ಪರೀಕ್ಷೆ ಇಂದೇ ಆಗುತ್ತಿತ್ತು; ಆದರೆ ದೈವೇಚ್ಛೆ ಬೇರೆ. ಪಿತೃಋಣವನ್ನು ನಾನು ತೀರಿಸಬೇಡವೆ?

**ನೇ:**—ಆಗಲಿ; ಆ ಋಣವು ಇಂದೇ ತೀರಲಿ. ಮಹಾರಾಜರ ಪರವಾಗಿ ಬಂದಿರುವ ಯಜ್ಞಪಶು ನಾನು. ನನ್ನನ್ನು ಕೊಂದು ನಿನ್ನ ಸೇಡನ್ನು ತೀರಿಸಿಕೋ. ಅತ್ಯಂತ ಪ್ರೀತಿಯ ವಸ್ತುವನ್ನರ್ಪಿಸುವುದೇ ಸ್ವಾರ್ಥತ್ಯಾಗದ ಲಕ್ಷಣವಲ್ಲವೇ?

**ತಾ:**—ಉದ್ದೇಶಿಸಿದ ಪಶು ತಪ್ಪಿಸಿಕೊಂಡಿರಲು ಇನ್ನೊಂದನ್ನು ಬಲಿಗೊಡುವುದು ಯಾವ ಕ್ರಮ? ನೀವು ಸುರಕ್ಷಿತವಾಗಿ ಹೊರಟು

ಹೋಗಿರಿ. ನಾನೂ ಇಲ್ಲಿಂದ ಹೋಗುವೆನು. ಸಾಧ್ಯವಾದರೆ ಸೇಡನ್ನು ತೀರಿಸಿಕೊಳ್ಳುವೆನು. ಇಲ್ಲವಾದರೆ . . . .

**ಖಂ:**—(ಜನಾಂತಿಕ) ಇವನನ್ನು ಹೋಗಗೊಡುವುದೇ? ಒಂದೇ ಪೆಟ್ಟಿನಲ್ಲಿ (ಎಂದು ಮುಂದುವರಿವನು).

**ರ:**—ಛೀ, ಛೀ! ತಡೆ, ತಡೆ! (ತಡೆವನು)

**ತಾ:**—ಇಲ್ಲವಾದರೆ ನನ್ನ ಆತ್ಮಾರ್ಪಣೆಯಾಗುವುದು.

**ನೇ:**—ನಾನೊಬ್ಬನೆ ಇಲ್ಲಿಂದ ಹೋಗುವಂತಿಲ್ಲ, ತಾರೆ! ನಾನು ಹೋಗುವುದಿದ್ದರೆ ನಿನ್ನನ್ನು ಈ ಪಾಪಕೂಪದಿಂದ ಉದ್ಧರಿಸಿ; ಇಲ್ಲಿರುವ ನರಪಿಶಾಚಿಗಳ ಕೈಯಿಂದ ನಿನ್ನನ್ನು ಬಿಡಿಸಿ, ನಿನ್ನೊಡನೆ. ಇಲ್ಲವಾದರೆ, ಇಗೋ! ಈ ಕಠಾರಿಯಿಂದಲೇ ನೀನು ನನ್ನನ್ನು ತಿವಿದು ಮುಂದೊತ್ತು. (ಕಠಾರಿಯನ್ನು ಕೊಡುತ್ತಾನೆ; ಅವಳು ತೆಗೆದುಕೊಳ್ಳುವುದಿಲ್ಲ.)

**ಖಂ:**—(ಜನಾಂತಿಕ) ಒಂದೇಟು ಸಾಕು. ತೆಗೆದುಕೋ? ಛೀ! ನೋಡುವುದೇ ಹೀಗೆ.

**ತಾ:**—ನಾನು ನಿಮ್ಮನ್ನು ಕೊಲ್ಲುವುದಿಲ್ಲ.

**ನೇ:**—ಬೇಡ; ನಾನೇ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತೇನೆ. ಅನುಜ್ಞೆಯನ್ನು ಕೊಡು.

**ತಾ:**—ಓಹೋ! ಸಾಯುವವರಿಗೆಲ್ಲ ನನ್ನ ಅನುಜ್ಞೆಯಾಗಬೇಕೋ?

**ನೇ:**—ಎಲ್ಲರಿಗಲ್ಲ, ನನಗೆ. ನನ್ನನ್ನೆ ನಿನಗೆ ಎಂದೋ ಅರ್ಪಿಸಿದ್ದೇನಷ್ಟೆ! ನಿನ್ನ ಅನುಮತಿಯಿಲ್ಲದೆ ಪ್ರಾಣತ್ಯಾಗವನ್ನಾದರೂ ಹೇಗೆ ಮಾಡಲಿ, ತಾರೆ?

**ತಾ:**—(ಆಲೋಚಿಸುತ್ತಾಳೆ.)

**ಖಂ:**—(ಜನಾಂತಿಕ) ಅಯ್ಯೋ! ಒಂದು ಮಾತು ಹೇಳಲಿಕ್ಕೂ ಇಷ್ಟು ವಿಚಾರವೇ? 'ಹೂಂ' ಎಂದರೆ ಸಾಕು. ಮಾವಾ! ನಾನೀಗ ಬರುತ್ತೇನೆ. (ಒಳಗೆ ಹೋಗುತ್ತಾನೆ.)

**ನೇ:**—ಇನ್ನೂ ಆಲೋಚನೆಯೇ, ತಾರೆ? ನನ್ನ ನಿನ್ನ ದ್ವೇಷಿಗಳು ಸಮಯವನ್ನು ಸಾಧಿಸುತ್ತಿರಬಹುದು. ಸಿಡಿಮದ್ದಿನ ಮೇಲೆ ನಿಂತಿದ್ದೇವೆಂಬುದನ್ನು ಮರೆತೆಯಾ?

**ತಾ:**— ಹಾ! ನನ್ನ ಅನುಜ್ಞೆಯಿಲ್ಲದೆ ಅದನ್ನು ಮುಟ್ಟುವವರಿಲ್ಲ.

(ಒಳಗಿನಿಂದ ಸಾವಳ್ಯನು) 'ಅಯ್ಯೋ, ಮೋಸ! ಹಿಡಿಯಿರಿ, ಮೋಸ!'

**ನೇ:**— ಮಾರೋಜಿ! ಏನು ನೋಡುತ್ತೀರಿ?

(ಅವರು ಒಳಗೆ ಹೋಗಿ ಖಂಡೋಜಿಯನ್ನೂ ರಘುನಾಥರಾಯನನ್ನೂ ಎಳೆದುಕೊಂಡು ಬರುತ್ತಾರೆ. ಸಾವಳ್ಯನು ಹಿಂದಿನಿಂದ ಬರುತ್ತಾನೆ. ಖಂಡೋಜಿಯ ಕೈಯಲ್ಲಿ ಬೆಂಕಿಯ ಕೊಳ್ಳಿ. ಅದನ್ನು ನೇತಾಜಿಯ ಮೇಲೆ ಗುರಿಯಿಟ್ಟು ಬಿಸಾಡುತ್ತಾನೆ. ನೇತಾಜಿ ತಪ್ಪಿಸಿಕೊಂಡು)—

**ನೇ:**— ಅಯ್ಯೋ! ನಾಯಕರೇ! ನಿಮ್ಮ ದುರಾಶಾಪಾಶದಲ್ಲಿ ಈ ನಿರಪರಾಧಿಗಳನ್ನು ಬಂಧಿಸಿ ಕುಣಿಸಿದಿರಲ್ಲವೇ?

**ಖಂ:**— ದ್ರೋಹಿ! ನಾಲಗೆಯನ್ನು ಬಿಗಿಹಿಡಿ!

**ನೇ:**— ಮತ್ತನಾದವನಿಗೆ ಭೂಮಿಯೇ ತಿರುಗಿದಂತೆ ಭಾಸವಾಗುತ್ತದೆ! ದುಷ್ಟರ ದೃಷ್ಟಿಯಲ್ಲಿ ಸಜ್ಜನರೆಲ್ಲರೂ ದ್ರೋಹಿಗಳೇ!

**ಖಂ:**— ಛೀ, ಮೂರ್ಖ! ಮಾವಯ್ಯನವರನ್ನು ಅಪಮಾನಗೊಳಿಸಿದೆ; ಅವರ ನಿರ್ಮಲ ಕೀರ್ತಿಗೆ ಕಳಂಕವನ್ನುಂಟುಮಾಡಿದೆ; ಆ ಮೇಲೆ ಸಮಯವನ್ನು ಸಾಧಿಸಿ ಅವರನ್ನು ಕೊಂದೆ. ಆಗಲಿ, ನಿನಗೆ ನಾಚುಗೆಯಿಲ್ಲವೇ! ನಮ್ಮೆದಿರಲ್ಲಿ ತಲೆಯೆತ್ತಲಿಕ್ಕೆ ನಿನಗೆ ಧೈರ್ಯವೇ?

**ನೇ:**— ಅಪವಾದಗಳ ಜಡಿಮಳೆಯನ್ನೆ ಸುರಿಸಿದೆಯಲ್ಲವೇ? ಆದರೆ ಇವು ನಿರಾಧಾರವಾದುವೆಂದು ಹೇಗೆ ಖುಜುಗೊಳಿಸಲಿ! (ವೀರಾವೇಶದಿಂದ) ತೆಗೆದುಕೋ ಖಡ್ಗವನ್ನು! ಧೈರ್ಯವಿದ್ದರೆ ಮಾಡು ದ್ವಂದ್ವ ಯುದ್ಧವನ್ನು.—"ಚಂದ್ರರಾಯರಿಗೆ ನಾನು ಆವಬಗೆಯಲ್ಲಾದರೂ ದ್ರೋಹವನ್ನೆಣಿಸಿದ್ದರೆ, ಮಹಾರಾಜರಾಗಲಿ ಅವರ ಪಕ್ಷದವರಾಗಲಿ ಚಂದ್ರರಾಯರನ್ನು ಕೊಂದಿದ್ದರೆ ನನ್ನ ಖಡ್ಗವು ಈ ಯುದ್ಧ ಮಧ್ಯದಲ್ಲಿಯೇ ಮುರಿದುಹೋಗಲಿ!" ಇಗೋ! ಈ ಪವಿತ್ರವಾದ ಪ್ರತಿಜ್ಞೆಯಿಂದಲೇ ಅಂಬಾಭವಾನಿ ಸಾಕ್ಷಿಯಾಗಿ ಖಡ್ಗವೆತ್ತುತ್ತೇನೆ. ಎಲ್ಲಿ? ಬಾ!

**ಖಂ:** – (ತಲೆತಗ್ಗಿಸಿಕೊಂಡು ಕಾಲ ಬೆರಳಿಂದ ನೆಲವನ್ನು ಗೀರುತ್ತಾನೆ.)

**ನೇ:**—ಏ, ಹೇಡಿ! ಏನು? ನಿನ್ನ ಕೈ ಆಡುವುದಿಲ್ಲವೇ? ನಿನ್ನ ಪೌರುಷ ವೆಲ್ಲ ಅಂಕೆಯಿಲ್ಲದ ಆ ನಾಲಗೆಯಲ್ಲಿ ಸೇರಿಹೋಗಿದೆಯಲ್ಲವೇ? (ಸಮೀಪಕ್ಕೆ ಹೋಗುತ್ತಾನೆ.)

**ಸಾ:**—(ಅವನನ್ನು ತಡೆದು) ಸ್ವಾಮಿ! ಇನ್ನು ರಕ್ತಪಾತವು ಬೇಡ.

**ಖಂ:**—ಏ, ಸಾವಳ್ಯ! ಏನು? ನೀನು ಶತ್ರುಗಳನ್ನು ಸೇರಿದೆಯಾ? ನನ್ನ ಅಪರಾಧವನ್ನು ಕ್ಷಮಿಸು; ನನ್ನನ್ನು ಮನ್ನಿಸು, ಸಾವಳ್ಯ!

**ಸಾ:**—ಹೇ ಕರ್ಕೋಟಕ!—ಅಮ್ಮಾ! ಸತ್ಯವು ಮರೆಮಾಜದು. ಕೊಲೆಗಾರನ ಪತ್ತೆಯಾಗುವುದು. ನನ್ನನ್ನು ಕ್ಷಮಿಸಿರಿ. (ಅಡ್ಡಬೀಳುವನು.)

**ಖಂ:**—ತಾರಮ್ಮ ಮೊದಲೆ ಕ್ಷಮಿಸಿದ್ದಾಳೆ ನಿನ್ನನ್ನು! ಏಳು! ಏಳು ಸಾವಳ್ಯ!

**ಸಾ:**—ಅಮ್ಮಾ! ನಾನೇ ದ್ರೋಹಿ! ಈ ದುಷ್ಟನ ಮಾತನ್ನು ನಂಬಿ—

**ಖಂ:**—ಓಹೋ? ಈ ಗುಟ್ಟನ್ನೆಲ್ಲ ಈ ನೇತಾಜಿಗೆ ತಿಳಿಸಿದ ದ್ರೋಹಿಯೋ? ನಿನಗೂ ಕ್ಷಮೆಯೋ?

**ಸಾ:**—ಅಬ್ಬ! ನಿನ್ನ ನಾಲಗೆಯೋ? ನಿನಗೆ ನಾನು ಎರಡೆಣಿಸುತ್ತಿದ್ದರೆ ನಿನ್ನ ಕಾರ್ಯಭಾರವೆಲ್ಲಿ ನಡೆಯುತ್ತಿತ್ತೊ? ಸುಮ್ಮನಿರು- ಅಮ್ಮಾ! ಇವನು ಕನ್ನಡಿಯಲ್ಲಿ ತೋರಿಸಿದ ಗಂಟಿಗೆ ಮರುಳಾಗಿ ದ್ರೋಹವನ್ನೆಸಗಿದವನು ನಾನೇ!

**ಖಂ:**—ಹೇ, ಸಾವಳ್ಯ! ಕನ್ನಡಿಯ ಗಂಟಲ್ಲೇನೋ? ನೋಡು! ಈಗಣ ಪ್ರಯತ್ನವು ನಿಷ್ಫಲವಾಯಿತು.

**ಸಾ:**—ಹೌದು! ದೇವರ ದಯೆಯೊಂದರಿಂದಲೇ ಬದುಕಿದೆನು ನಾನು! ನಿನ್ನ ದಯೆಯಿಂದಲ್ಲ!

**ಖಂ:**—ಇನ್ನೂ ನಮ್ಮಿಂದ ಎಷ್ಟೋ ಕೆಲಸಗಳಾಗಲಿಕ್ಕಿವೆ, ಸಾವಳ್ಯ! ಅಮ್ಮನ ಪ್ರತಿಜ್ಞೆಯಂತೆ ಆಗಬೇಡವೆ?

**ಸಾ:**—ಓಹೋ! ಪ್ರತಿಜ್ಞೆಯಂತಾಗುತ್ತದೆ, ಈಗಲೆ!

**ಖಂ:**—ಛೀ, ಛೀ! ನೀನು ತಾರೆಗೆ ಮೋಸಮಾಡಬೇಡ. ನಿನಗೆ ಕೊಡುವ ಪುರಸ್ಕಾರವನ್ನು ಅಮ್ಮನ ಇದಿರಲ್ಲಿಯೇ ನಿಶ್ಚಯಿಸುವ.

**ಸಾ:**—ಓಹೋ! ನನಗಾಗುವ ಪುರಸ್ಕಾರವಲ್ಲವೆ? ಇಗೋ! (ಎಂದು ಬಚ್ಚಿಟ್ಟಿದ್ದ ಖಂಡೋಜಿಯ ಕಠಾರಿಯನ್ನು ತೆಗೆದು ತೋರಿಸುವನು.)

**ಖಂ:**—ಛೇ! ಅದಲ್ಲ. ಸಾವಳ್ಯ!

**ಸಾ:**—ನನಗೆ ಪುರಸ್ಕಾರವಲ್ಲ. ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ. ; ಅದಕ್ಕೆ ಸಿದ್ಧನಾಗಿದ್ದೇನೆ.

**ಖಂ:**—(ಸಿಟ್ಟಿನಿಂದ) ವಿಚಾರಿಸು; ದ್ರೋಹಿಗಾಗುವ ಶಿಕ್ಷೆಯು ಅರಿವಿದೆಯೇ?

**ಸಾ:**—ಓಹೋ! ಎಲ್ಲವನ್ನೂ ಬಲ್ಲೆನು.—ಅಮ್ಮಾ! ನಾನೇ ಅಪರಾಧಿ. ನನ್ನನ್ನು ಕ್ಷಮಿಸಿರಿ. (ಎಂದು ಪಾದದ ಬಳಿ ಬೀಳುತ್ತಾನೆ. ತಾರೆ ಸ್ವಲ್ಪ ಹಿಂದೆ ಸರಿದು ನಿಲ್ಲುತ್ತಾಳೆ)

**ಖಂ:**— ಏ, ಮೂರ್ಖ! (ಎಂದು ತನ್ನ ಕಠಾರಿಯನ್ನು ಹುಡುಕುತ್ತಾನೆ)

**ನೇ:**—ಅವನನ್ನು ನಿಶ್ಶಸ್ತ್ರನನ್ನಾಗಿ ಮಾಡಿ, ಬಂಧಿಸಿರಿ.

**ಖಂ:**—ಅಯ್ಯೋ, ಪಾಪಿ! ಒಂದು ಆಯುಧವಿದ್ದರೆ——?

**ನೇ:**—ನಾನೇ ಕೊಟ್ಟೆನಲ್ಲ! ತೆಗೆದುಕೋ ಖಡ್ಗವನ್ನು! (ಖಂಡೋಜಿ ಮುಖವನ್ನು ತಗ್ಗಿಸುತ್ತಾನೆ. ಸೈನಿಕರು ಅವನನ್ನು ಬಂಧಿಸುತ್ತಾರೆ)

**ಸಾ:**—ಅಮ್ಮಾ! ನನಗೆ ಅಭಯವಾಗಲಿ.-ಜೀವದಾನ ಮಾಡಿ.

**ಖಂ:**—ಹಾಗೀಗ, ಬೇಡಿಕೋ! ನಾವಿಬ್ಬರೂ ಜತೆಯಲ್ಲಿ ಇವರ ರುಂಡಗಳನ್ನು ಚೆಂಡಾಡಬಹುದಿತ್ತು.

**ತಾ:**—ಸಾವಳ್ಯ! ಏಳು, ಮನಬಿಚ್ಚಿ ಮಾತನಾಡಬಾರದೇ?

**ಸಾ:**—ಅಮ್ಮಾ: ಜೀವದಾನ ಮಾಡಿರಿ. ಕ್ಷಮಿಸಿದೆನೆಂದು ಹೇಳಿರಿ.

**ನೇ:**—ಹೇ, ಸಾವಳ್ಯ! ಮಹಾರಾಜರ ಹೆಸರಲ್ಲಿ ನಿನಗೆ ಅಭಯವನ್ನು ಕೊಡುತ್ತೇನೆ. ಹೂಂ-ಏಳು! ಅನುತಾಪವೇ ಪಾಪಕ್ಕೆ ಪ್ರಾಯಶ್ಚಿತ್ತವೆಂದು ಅವರ ತತ್ವ.

**ಸಾ:**—ನಾಯಕರೇ! ನಾನು ನಿಮ್ಮಲ್ಲಿಯೂ ಅಪರಾಧಿ. (ನಿಲ್ಲುತ್ತಾನೆ)

**ನೇ:**—ಏನೋ, ನೀನು ದ್ರೋಹಿ, ಅಪರಾಧಿ ಎಂದರೆ ನಮಗೇನು ತಿಳಿಯುತ್ತದೆ? ಮನಬಿಚ್ಚಿ ಮಾತನಾಡಬಾರದೆ.

**ಖಂ:**—ನಿನ್ನ ಶಿವಾಜಿಯು ದ್ರವ್ಯದ ಆಶೆಯಿಂದ ಚಂದ್ರರಾಯರನ್ನು ಕೊಂದವನು ಅವನೇ!

**ತಾ:**—ಹಾ! ಅಯ್ಯೋ! ಅಪ್ಪಾ!–(ಬೀಳುವಂತಾಗುತ್ತಾಳೆ. ನೇತಾಜಿ ಆವಳನ್ನು ಆಧರಿಸಿ ಹಿಡಿದು)

**ನೇ:**—ಮುಚ್ಚುಬಾಯಿ! ಅವನ ಹೇಳಿಕೆಯು ಮಧ್ಯದಲ್ಲಿ ನಿನ್ನ ಸುಳ್ಳಿನ ಸುರಿಮಳೆ ಬೇಡ.

**ಸಾ:**—ಅಯ್ಯೋ! ನಿನ್ನ ಬಾಯಲ್ಲಿ ಹುಳ ಬೀಳಲಿ. ಇನ್ನೂ ಏಷ್ಟೋ ಸುಳ್ಳು ಹೇಳುತ್ತೀ? (ತಾರೆಯ ಕಡೆಗೆ ತಿರುಗಿ) ಚಂದ್ರರಾಯರು ನನ್ನ ಅಜಾಗ್ರತೆಯಿಂದಾಗಿ ಮಡಿದರು.

**ನೇ:**—ಹಾಗೆಂದರೆ? (ತಾರೆ ಕಣ್ಣು ಕೆರಳಿಸಿ ನೋಡುತ್ತಾಳೆ.)

**ಸಾ:**—ಈ ನೀಚನ ದುರ್ಬೋಧೆಗೊಳಗಾಗಿ, ತೋರಿಸಿದ ಹಣದ ಗಂಟಿಗೆ ಮರುಳಾಗಿ, ನನ್ನ ಧನಿಯನ್ನು, ನನ್ನನ್ನು ಸಾಕಿ ಸಲಹಿದ ಚಂದ್ರರಾಯರನ್ನು ಕೊಲ್ಲಲಿಕ್ಕೆಂದು ಅವರ ಸೇವಕನಂತೆ ಅವರನ್ನು ಅನುಸರಿಸುತ್ತಿದ್ದೆನು. ಆಗ . . . . .

**ತಾ:**—ಸಮಯವನ್ನು ಸಾಧಿಸಿದೆಯಲ್ಲವೆ? ಅಯ್ಯೋ! (ಪ್ರಜ್ಞಾಹೀನಳಾಗುತ್ತಾಳೆ)

**ಸಾ:**—ಅಮ್ಮಾ! ಇಲ್ಲ, ನಾನು ಕೊಲ್ಲಲಿಲ್ಲ. ಒಂದು ದಿನ ಬೇಟೆಯಾಡುತ್ತಿದ್ದಾಗ ಒಂದು ಹುಲಿ ಅವರ ಮೇಲೆ ಹಾರಿತು. ಆಗ . . .

**ತಾ:**—(ಫಕ್ಕನೆ) ಹುಲಿ! ಎಲ್ಲಿ? ಅಯ್ಯೋ, ಹುಲಿಯೇ! (ಸ್ಮೃತಿಯಿಲ್ಲದೆ ಬೀಳುತ್ತಾಳೆ. ನೇತಾಜಿ ಆವಳನ್ನು ಸಂತೈಸುತ್ತಾನೆ.)

**ಸಾ:**—ಅಮ್ಮಾ, ನನ್ನಿಂದಾದ ಅಪರಾಧವನ್ನು ಕೇಳಿರಿ. ನಾನು ಹುಲಿಯನ್ನು ಕೊಲ್ಲಬಹುದಿತ್ತೋ, ಏನೋ? ಆದರೆ ನನ್ನ ಕೈಯೇ ಆಡಲಿಲ್ಲ.

**ನೇ:**—ಹೂಂ–ಖಂಡೋಜಿ ಇದನ್ನು ಬಲ್ಲನೇ?

**ಸಾ:**—ಓಹೋ! ಈ ವಿಷಯಗಳನ್ನೆಲ್ಲ ಬಲ್ಲನು.

**ಖಂ:**—ಛೇ! ಸುಳ್ಳು. ಎಲ್ಲಿಂದಲೋ ಬಂದ ಬಾಣದ ಪೆಟ್ಟಿನಿಂದ ಸತ್ತರೆಂದು ನನಗೆ ತಿಳಿದ ವಿಷಯ.

**ನೇ:**—ನಿಮ್ಮ ಕುತಂತ್ರದಿಂದ ಈ ಸಾಧ್ವಿಯನ್ನು ಎಂತಹ ಸಂಕಷ್ಟ ಕ್ಕೊಳಪಡಿಸಿದಿರಿ! ಅವಳಿಂದ ಎಂತಹ ಹೇಯವಾದ ಕಾರ್ಯ ವನ್ನು ಮಾಡಿಸುತ್ತಿದ್ದಿರಿ!

**ಸಾ:**—ಬುದ್ಧೀ! ಅಷ್ಟೇ ಅಲ್ಲ. ರುದ್ರಮಂಡಲದ ಯುದ್ಧದಲ್ಲಿ ನಿಮ್ಮನ್ನು ಕೊಲ್ಲಬೇಕೆಂದು ಪ್ರಯತ್ನಿಸಿದೆವು. ಆದರೆ ನಿಮ್ಮ ವೀರಾವೇಶವನ್ನು ನೋಡಿ ನಿಮ್ಮನ್ನು ಸಮೀಪಿಸುವ ಧೈರ್ಯವೂ ಈ ಹೇಡಿಗಾಗಲಿಲ್ಲ.

**ಖಂ:**—ಎಲ್ಲ ಸುಳ್ಳು! ಶುದ್ಧ ಸುಳ್ಳು! ನೇತಾಜಿಯನ್ನು ಕೊಲ್ಲಲಿಕ್ಕೆ ಪ್ರಯತ್ನಿಸಿದುದೇ ನಾನು? ಛೀ!

**ಸಾ:**—ನಿಮ್ಮ ಮಾರೋಜಿಯನ್ನೆ ಕೇಳಿ. ಯುದ್ಧಮಧ್ಯದಲ್ಲಿ ಎರಡು ಸಲ ನಿಮ್ಮ ಮೇಲೆ ಎತ್ತಿದ ಖಡ್ಗವನ್ನು ತಡೆದವನು ಅವನು. ಅವನಿಗೇನೋ ಬಹಳ ಸಂಶಯವಾಗಿತ್ತು. ಅವನು ಈ ವಿಷ ಯವನ್ನು ನನ್ನಲ್ಲಿ ಎಷ್ಟೋ ಸಲ ಕೇಳಿದನು.

**ಮಾ:**—ಸ್ವಾಮೀ! ಇದು ನಿಜ—ಆದರೆ, ಈ ವಿಚಾರವನ್ನು ಹೇಳಿ ನಿಮ್ಮಿಬ್ಬರಲ್ಲಿ ಒಡಕುಂಟುಮಾಡಬಾರದೆಂದು ನಾನು ಮೌನ ದಲ್ಲಿದ್ದೆನು.

**ಖಂ:**—ಅವನಿಗೆ ಇವನೊಬ್ಬ ಸಾಕ್ಷಿ! ಹೋಗೋ!

**ನೇ:**—ಏ ಹೇಡಿ! ನಿನ್ನ ದುರಾಶೆಗೆ ಈ ಬಾಲೆಯನ್ನು ಬಲಿಗೊಡಬೇ ಕಿತ್ತೆ?

**ಖಂ:**—ನೀವೆಲ್ಲರೂ ದ್ರೋಹಿಗಳು. ನಾನು ನಿಮ್ಮಲ್ಲಿ ಮಾತನಾಡು ವುದಿಲ್ಲ.

**ನೇ:**—ಓಹೋ! ನಿನಗೆ ದ್ರೋಹಿಗಳೇ! ನಿನ್ನ ದುರುದ್ದೇಶವನ್ನು ಭಂಗಿ ಸಿದವರಲ್ಲವೇ! (ಸಿಳ್ಳು ಹಾಕುತ್ತಾನೆ. ತಾರೆ ಏಳುತ್ತಾಳೆ).
ಹಾ, ಮಾರೋಜಿ! ಒಳಗೆ ಹೋಗು, ಜಾಗ್ರತೆ!

**ಸಾ:**—ಭಯವಿಲ್ಲ, ಬುದ್ಧೀ! ಸಿಡಿಮದ್ದಿನ ಮೂಟೆಗಳಿಗೆಲ್ಲ ನೀರು ಹೊಯ್ದಿದ್ದೇನೆ. ಈ ಕರ್ಕೋಟಕನ ವಿಷದ ಹಲ್ಲನ್ನು ಮುರಿದಿ ದ್ದೇನೆ.

**ನೇ:**—ಆಗಲಿ; ಇಲ್ಲಿ ಎಷ್ಟು ಸೈನಿಕರಿದ್ದಾರೆ?

**ಸಾ:**—ಐವತ್ತು ಸೈನಿಕರೂ, ಹತ್ತು ಕೂಲಿಯಾಳುಗಳೂ ಇದ್ದಾರೆ. ಆದರೆ ಅಮ್ಮನವರ ಅಪ್ಪಣೆಗೆ ವಿರೋಧವಾಗಿ ಅವರು ವರ್ತಿಸು ವಂತಿಲ್ಲ.—ಓಹೋ! ಅವರೇ ಬಂದರು. (ಕೆಲವರು ಸೈನಿಕರಪ್ರವೇಶ.)

**ಖಂ:**—ಶಹಭಾಸ್! ವೀರಾಗ್ರಣಿಗಳೇ! ಸಕಾಲದಲ್ಲಿ ಬಂದಿರಿ. ಈ ಖೂಳನಿಂದಾಗಿ ದೊಡ್ಡ ಮೋಸವಾಗಿದೆ. ಈ ಶತ್ರುಗಳನ್ನು ಸಂಹರಿಸಿರಿ. ನಿಮ್ಮ ರಾಣಿಯನ್ನೂ ನನ್ನನ್ನೂ ಕಾಪಾಡಿರಿ. ಹೂಂ—

**ತಾ:**—ಬೇಡ! ಖಡ್ಗವೆತ್ತುವ ಅವಶ್ಯಕತೆಯಿಲ್ಲ.

**ನೇ:**—ತಾರೆ! ಅವರಿಗೇನಪ್ಪಣೆ?

**ತಾ:**—(ನಮಸ್ಕರಿಸಿ) ನೀವೇ ನನ್ನ ನಾಯಕರು. ನಿಮ್ಮ ಆಜ್ಞೆಯನ್ನು ಅವರು ಪಾಲಿಸುವರು.

**ಖಂ:**—ಅಯ್ಯಯ್ಯೋ! ನಾಚುಗೆಯಿಲ್ಲವೇ ನಿನಗೆ?

**ನೇ:**—ಇನ್ನೂ ಸ್ವಲ್ಪ ಬುಸುಗುಟ್ಟಲಿ! ಇಲ್ಲಿ ಕೆಲವರನ್ನು ಕಾವಲಿರಿಸಿ ನಾವು ಪುರಂದರಗಡವನ್ನು ಸೇರಬೇಕು. ಮಹಾರಾಜರು ನಮ್ಮನ್ನು ಪ್ರತೀಕ್ಷಿಸುತ್ತಿರಬಹುದು.

**ಖಂ:**—ನನಗೆ ಪುರಂದರಗಡದಲ್ಲೇನು ಕೆಲಸ?

**ತಾ:**—ಆದರೆ ನನ್ನದೊಂದು ಬಯಕೆ.

**ನೇ:**—ಏನದು?

**ತಾ:**—ನನ್ನ ತಂದೆಯವರ ಶವಸಂಸ್ಕಾರವಾದ ಸ್ಥಳವಿದು. ಇಲ್ಲಿಯೇ ಅವರ ಆತ್ಮತೃಪ್ತಿಯನ್ನು ಮಾಡಬೇಕೆಂದು ನಾನು ಹವಣಿಸಿದುದು.

**ಖಂ:**—ನೀನು ನನ್ನನ್ನು ಮದುವೆಯಾಗಬೇಕೆಂದು ಅವರು ಬಯಸಿದುದು. ಹಿಡಿ! ನೇತಾಜಿಯ ಕೈಹಿಡಿ! ಅವರ ಆತ್ಮಕ್ಕೆ ತೃಪ್ತಿಯಾಗುತ್ತದೆ.

**ನೇ:**—ಸತ್ಯವು ಹೊರಬಿದ್ದುದೇ ತಕ್ಕ ಪ್ರತೀಕಾರ. ಯಜ್ಞದ ಪೂರ್ತಿಯಾಯಿತು. ರಾಯರ ಸ್ಮಾರಕವಾಗಿ ಇಲ್ಲಿಯೇ ಸಮಾಧಿಯನ್ನು ರಚಿಸುವ ಏರ್ಪಾಡುಮಾಡುವ.

**ತಾ:**— ನಿಮ್ಮಿಚ್ಛೆಯಂತೆ! (ಸುಗುಣನಾಯಕನೂ ಸೈನಿಕರೂ ಬರುತ್ತಾರೆ.)

**ನೇ:**— ಭಾವಾ! ಅಂಬಾಭವಾನಿಯ ಕೃಪೆಯಿಂದ, ಮಹಾರಾಜರ ಅನುಗ್ರಹದಿಂದ, ನಿಮ್ಮ ಆಶೀರ್ವಾದದಿಂದ, 'ಸತ್ಯಕ್ಕೆ ಚ್ಯುತಿಯಿಲ್ಲ' ವೆಂಬ ಮಾತು ಸತ್ಯವಾಯಿತು. (ನಮಸ್ಕರಿಸುವನು, ತಾರೆಯೂ ನಮಸ್ಕರಿಸುವಳು.)

**ಖಂ:**— ಅಬ್ಬಬ್ಬ! ಎಲ್ಲರೂ ನಮಸ್ಕರಿಸಲಿ! ನಾನು ನಮಸ್ಕರಿಸಲಿಕ್ಕಿಲ್ಲ.

**ಸು:**— ನೇತಾ! ನಿನ್ನ ಸ್ಥೈರ್ಯ ಮತ್ತು ಪರಾಕ್ರಮಕ್ಕೆ ಯೋಗ್ಯಳಾದ ಸದ್ಗುಣಮಣಿಯನ್ನು ಅರ್ಧಾಂಗಿಯಾಗಿ ಪಡೆದೆ. ನೀನು ಈ ಬಾಲೆಯನ್ನು ಕರೆದುಕೊಂಡು ಕೂಡಲೆ ಹೋಗು. ಇಲ್ಲಿ ಎಲ್ಲ ವ್ಯವಸ್ಥೆಗಳನ್ನು ನಾನೇ ಮಾಡಿಸಿ ಹಿಂದಿನಿಂದ ಬರುವೆನು.

**ನೇ:**— ಭಾವಾ! ಶತ್ರುಪಕ್ಷವೆಂದಿಲ್ಲ. ಜಾವಳಿಯ ಸೈನಿಕರೂ ನಮ್ಮ ಅನುಜ್ಞೆಯಂತೆಯೇ ನಡೆವರು.

**ಮಾ:**— ಜಯ ಅಂಬಾಭವಾನಿ! ಜಯ— ಶಿವಾಜಿ ಮಹಾರಾಜರಿಗೆ ಜಯವಾಗಲಿ!

---

## ದೃಶ್ಯ ೭

(ವಿಶಾಲಗಡ_ಸುಗುಣನಾಯಕನ ಮನೆಯ ಕೊಠಡಿ)

**ತಾರೆ:**—(ಆಲೋಚಿಸುತ್ತಾ) ಸ್ವಾರ್ಥಪರನಾದ ಮಾನವನು ಎಂತಹ ನೀಚಕೃತ್ಯವನ್ನೂ ಮಾಡುವನು. ತಿಳಿದೂ ತಿಳಿದೂ ಖಂಡೋಜಿ ನನ್ನನ್ನು ಪಾಪಕೂಪಕ್ಕೆಳೆದನಲ್ಲವೇ? ತಂದೆಯವರ ಕೃತಘ್ನತೆಗೂ ಅವನೇ ಕಾರಣವಾಗಿರಬಹುದು. ಹಾಗಲ್ಲವೇ ಸಾವಳ್ಯನ ಹೇಳಿಕೆ?— ಏ, ಖಂಡೋಜಿ! ಸ್ತ್ರೀವ್ಯಾಮೋಹದಿಂದ ಲೋಕದಲ್ಲಿ ಎಂತೆಂತಹ ಅನಾಹುತಗಳಾಗುತ್ತವೆಂಬುದಕ್ಕೆ ನಿನ್ನ ಚರ್ಯೆಯೇ ನಿದರ್ಶನ. ನಿನ್ನಂತಹವನೂ ಸುಧಾರಿಸಿಕೊಳ್ಳುವುದಿದೆಯೇ?

ನಿನ್ನನ್ನು ಕ್ಷಮಿಸಿದುದು ದೊಡ್ಡ ಅಪರಾಧ. ಇನ್ನಾರಾದರೂ ಅವಿಚಾರಿಗಳ ಆಶ್ರಯುವನ್ನು ಹೊಂದಿ ಅವರನ್ನೆ ಮಹಾರಾಜರ ಪ್ರತಿಸ್ಪರ್ಧಿಗಳಾಗಿ ಮಾಡಲು ನೀನು ಪ್ರಯತ್ನಿಸಬಹುದು. ಅಂತಹ ಕೆಲಸದಲ್ಲಿ, ಒಡಕನ್ನುಂಟುಮಾಡುವುದರಲ್ಲಿ ನೀನು ಸಮರ್ಥನು.

ಆದರೆ, ಮಹಾರಾಜರ ಸೌಜನ್ಯವನ್ನೂ, ಔದಾರ್ಯವನ್ನೂ, ತೇಜಸ್ಸನ್ನೂ, ಸೌಮ್ಯಮೂರ್ತಿಯುನ್ನೂ ನೋಡಿ ನಾನು ಮುಗ್ಧೆಯಾಗಿದ್ದೇನೆ. ಛೀ! ಅವರ ತೀರ್ಮಾನವು ಅಯೋಗ್ಯವೆನ್ನಲಾರೆ.

**ನೇ:**—(ನೇತಾಜಿ ಸಮೀಪಕ್ಕೆ ಬಂದು) ಏನು ತಾರೆ? ಪ್ರತೀಕಾರವನ್ನು ಸಾಧಿಸುವುದಕ್ಕೋಸ್ಕರ ಹೊಸ ಹಂಚಿಕೆಯ ಆಲೋಚನೆಯೇ?

**ತಾ:**—ಪ್ರತೀಕಾರವಾಯಿತಲ್ಲ! ನನ್ನನ್ನುದ್ಧರಿಸಲಿಕ್ಕೆ ಪ್ರಯತ್ನಿಸಿದವರ ಕೊರಳಿಗೆ ಒಂದು ಕೊರಡು.

**ನೇ:**—ತಾರುಣ್ಯದಲ್ಲಿ ಸ್ವಾಭಾವಿಕವಾಗಿ ಉಂಟಾಗುವ ಅಲಕ್ಷ್ಯಭಾವ, ಎದೆಗಾರಿಕೆ, ಸಾಹಸಗಳನ್ನು ತಗ್ಗಿಸಲಿಕ್ಕೆ ಅಂತಹ ಒಂದು ಕೊರಡಿನ ಆವಶ್ಯಕತೆಯಿದೆ. ಸಂಸಾರ ಶಕಟವನ್ನು ಸುಗಮವಾಗಿ ನಡೆಯಿಸಲು ಅಗಮಾತ್ರ ಸಾಧ್ಯವಲ್ಲವೆ, ತಾರೆ?

**ತಾ:**—ಆಗಲಿ, ನಾನಾಗಿ ಹಾರೈಸಿದುದು; ನೀವಾಗಿ ಸ್ವೀಕರಿಸಿದುದು.

**ನೇ:**—ಅದಿರಲಿ, ಪ್ರಿಯೇ! ನಿನ್ನ ಮುಖವು ಇನ್ನೂ ಕಂದಿರುವುದೇಕೆ?

**ತಾ:**—(ಆವನ ಭುಜದ ಮೇಲೆ ಕೈಯಿಟ್ಟು) ಛೀ! ನನಗೆ ಚಿಂತೆಯೆಲ್ಲಿಂದ? ಹಿಂದಿನ ವಿಷಯುಗಳ ಸ್ಮರಣೆಯಾಗುವಾಗ ನನ್ನ ಭೀಕರ ಕೃತ್ಯಗಳಿಗಾಗಿ ನನ್ನಲ್ಲಿಯೇ ಭಯುವುಂಟಾಗುತ್ತದೆ.

**ನೇ:**—ಆಹಾ! 'ಮನಸ್ಸಿನ ಕಳವಳವು ಮುಖದಲ್ಲಿ ವ್ಯಕ್ತವಾಗುತ್ತದೆ' ಎಂಬ ಮಾತು ನಿಜವಾದರೆ ನಿನ್ನ ಮನಸ್ಸಿನಲ್ಲಿ ಏನೋ ಗಹನ ವಿಚಾರವಿದೆಯೆಂದು ನಾನು ನಿಸ್ಸಂದೇಹವಾಗಿ ಹೇಳಬಲ್ಲೆನು.

**ತಾ:**—ನಾಥ! ನನ್ನದೇನು ಗಹನ ವಿಚಾರ? ಹೆಂಗುಸಿಗೆ ಸ್ವಾಭಾವಿಕವಾದ ಭಯ.

**ನೇ:**—ಇನ್ನೂ ಭಯುವೇ, ತಾರೆ! ಯಾರ ಭಯು?

**ತಾ:**—ಅಂತಹುದೇನಲ್ಲ! "ಕಾಡಲ್ಲಿದ್ದ ಶ್ವಾಪದವನ್ನು ನಾಡಲ್ಲಿ ತಂದುಬಿಡುವುದೇ?" ಎಂಬೊಂದು ಪ್ರಶ್ನೆ.

**ನೇ:**—ಛೀ! ಹಾಗೆ ಮಾಡಿದವರಾರು?

**ತಾ:**—ಮಹಾರಾಜರು.

**ನೇ:**—(ಆಲೋಚಿಸಿ)–ಏನು? ಖಂಡೋಜಿಯ ವಿಚಾರವೇ?

**ತಾ:**—ಅದನ್ನೆ ಆಲೋಚಿಸುತ್ತಿದ್ದೆ. ಚಿಕ್ಕಂದಿನಿಂದಲೂ ಮೋಸ, ಕುತಂತ್ರಗಳ ಪ್ರಯೋಗಗಳಲ್ಲಿ ನುರಿತು, ಕುವಿದ್ಯೆಗಳಲ್ಲಿ ಪಳಗಿದ ಆ ನರರಾಕ್ಷಸನನ್ನು ಬಿಟ್ಟುಬಿಟ್ಟುದು ಅಮಂಗಲದಾಯಕವೆಂದೇ ನನ್ನ ಭಾವನೆ.

**ನೇ:**—ಅವನು ಮಾಡಿದ ದುಷ್ಕೃತ್ಯದಿಂದ ಅವನನ್ನು ನೀನು ಶ್ವಾಪದಕ್ಕೆ ಸರಿಹೋಲಿಸಿದರೂ, ಸೃಷ್ಟಿ ನಿಯಮದಲ್ಲಿಯೇ ಅದಕ್ಕೂ ಮಾನವನಿಗೂ ಬಹಳ ವ್ಯತ್ಯಾಸವಿದೆ.... ದುಷ್ಟಮೃಗವನ್ನಾದರೂ ಪಳಗಿಸಬಹುದಲ್ಲವೇ?

**ತಾ:**—ಆದರೇನು ಪ್ರಯೋಜನ? ತನ್ನ ಶಿಕ್ಷಕನ ಇದಿರಲ್ಲಿ ಭಯದಿಂದ ವಿಧೇಯತೆಯನ್ನು ಪ್ರಕಟಿಸಿದರೂ ತನ್ನ ಹುಟ್ಟುಗುಣವನ್ನು ಅದು ಎಂದೂ ಮರೆಯಲಾರದು.

**ನೇ:**—ನಿಜ! ಆದರೆ ಮಾನವನು ಸ್ವಭಾವತಃ ವಿವೇಕವುಳ್ಳವನು-ಅವನ ಶಿಕ್ಷಣ ಒಡನಾಟಗಳಿಂದಾಗಿ ಅವನ ಶೀಲಸ್ವಭಾವಗಳಲ್ಲಿ ಬದಲಾವಣೆಗಳಾಗುತ್ತವೆ. ಅವು ಸದ್ಗುಣಗಳೋ ದುರ್ಗುಣಗಳೋ ಆಗುವುದು ಸಂದರ್ಭವನ್ನನುಸರಿಸಿ.

**ತಾ:**—ಆದರೆ, ದುರ್ಮಾರ್ಗದಲ್ಲಿ ಆಸಕ್ತಿಯಿರುವವನನ್ನು ಮನ್ನಿಸಿದರೆ?

**ನೇ:**—ಅಂತಹವನನ್ನು ಅಂಕೆಯಲ್ಲಿಟ್ಟುಕೊಂಡು, ದುರ್ಮಾರ್ಗಕ್ಕೆ ತಿರುಗಲಿಕ್ಕೆ ಅವಕಾಶವನ್ನು ಕೊಡದೆ, ಋಜುಮಾರ್ಗದಲ್ಲಿ ಹೋಗುವಂತೆ ಮಾಡಬೇಕು. ಹಾಗೆ ಹೋಗುವುದು ಮಾನವ ಸ್ವಭಾವವು. ತಪ್ಪಿದವನನ್ನು ತಿದ್ದಲಿಕ್ಕೆ ಪ್ರಯತ್ನಿಸುವುದು ತಿಳಿವುಳ್ಳವರ ಧರ್ಮವು.

**ತಾ:**— ಏನೋ? ಮಾನವ ಸ್ವಭಾವದಲ್ಲಿ ನಿಮ್ಮ ವಿಶ್ವಾಸವು ಅಚಲವಾದುದು.

**ನೇ:**— ನನ್ನದಲ್ಲ; ಮಹಾರಾಜರದು. ಆದರೆ ಸದ್ಗುಣದ ಮತ್ತು ಮಹಾತ್ಮರ ಪ್ರಭಾವವೆಂತಹುದೆಂಬುದನ್ನು ನೀನು ಬೇಗನೆ ತಿಳಿವೆ. ಖಂಡೋಜಿ ಮಹಾರಾಜರ ಪಕ್ಷವನ್ನು ವಹಿಸಿ ಸ್ವಾಮಿನಿಷ್ಠನೂ ವೀರಾಗ್ರೇಸರನೂ ಆಗಬಹುದು.

**ತಾ:** — ಹಾಗೆ ಮಾರ್ಪಡುವ ಮೊದಲೇ ಪುನಃ ಕುಮಾರ್ಗದಲ್ಲಿ ಬಿದ್ದು ನಮಗೇನಾದರೂ ವಿಪತ್ತನ್ನು ತಂದೊಡ್ಡುವನೋ ಎಂದು ಸಂದೇಹ.

**ನೇ:**— ಛೇ! ಹಾಗಾಗದು; ಅವನ ಕಾರ್ಯಕಲಾಪಗಳನ್ನೆಲ್ಲ ಗುಟ್ಟಿನಲ್ಲಿಯೇ ತಿಳಿದುಕೊಳ್ಳುವ ಗುಪ್ತಚರರು ಅವನ ಬೆನ್ನಹಿಂದಿದ್ದಾರೆ.

**ತಾ:**— ಸರಿ, ಸರಿ! (ಹೈಮವತಿ ಪ್ರವೇಶಿಸಿ)

**ಹೈ:**— ಏನು ಸರಿ, ರಾಣೀಸಾಹೇಬರೆ?

**ತಾ:**— (ತಿರುಗಿ) ಓಹೋ, ಅತ್ತಿಗೆ! ನೀವೇನೆಂದುದು?

**ಹೈ:**— 'ರಾಣೀಸಾಹೇಬರೆ' ಎಂದುದು. ನಾನೂ ಹಾಗೆಯೇ ಕರೆಯಬೇಕಷ್ಟೆ!

**ನೇ:**— ಅಕ್ಕಾ, ಹಾಸ್ಯಮಾಡುವ ಕಾಲವಲ್ಲವೇ?

**ಹೈ:**— ಅಲ್ಲ ರಾಜರೆ! ಹಾಸ್ಯವಲ್ಲ.

**ನೇ:**— ಆಯಿತು; ರಾಜನಾಯಿತು, ರಾಣಿಯಾಯಿತು. ರಾಜ್ಯವೊಂದು ಮಾತ್ರ ಇಲ್ಲ.

**ಹೈ:**— ಇದೆ; ಜಾವಳಿಯ ರಾಜ್ಯವಿದೆ.

**ತಾ:**— ಅತ್ತಿಗೆ! ನಿಮ್ಮ ಆಶೀರ್ವಾದದಿಂದ ಹಾಗೇಕೆ ಆಗಬಾರದು.

(ಸುಗುಣನಾಯಕನು ಪ್ರವೇಶಿಸಿ)

**ಸು:**— ಮಹಾರಾಜರ ಕೃಪೆಯಿಂದ ರಾಜರಾಣಿಯರೇ ಆದಿರಿ.

**ನೇ:**— ಸರಿ, ಭಾವಾ! ನೀವೂ ಸೇರಿದಿರೇ ಹಾಸ್ಯಮಾಡಲಿಕ್ಕೆ! (ಮಾರೋಜಿ ಪ್ರವೇಶಿಸಿ ಹಿಂದಿನಿಂದ ನಿಲ್ಲುತ್ತಾನೆ.)

**ಹ್ಯೆ:**—ನೇತಾ! ಹಾಸ್ಯವಲ್ಲ. ನಾಡಿದು ಯುಗಾದಿಯ ದಿವಸವೇ ಪಟ್ಟಾಭಿಷೇಕವಂತೆ! ಹೊಸ ಸಂವತ್ಸರಕ್ಕೆ ಜಾವಳಿಗೆ ಹೊಸ ರಾಜರು.

**ಸು:**—ಹೌದು, ಇದು ಮಹಾರಾಜರ ಅಪೇಕ್ಷೆ.

**ನೇ:**—ನನಗೆ ಪಟ್ಟಾಭಿಷೇಕವೇ? ಏಕೆ?

**ಸು:**—ನೋಡು, ಈ ತರುಣಿಯನ್ನು ಮದುವೆಯಾದುದಕ್ಕೆ ಶಿಕ್ಷೆ.
(ತಾರೆ ಲಜ್ಜೆಯಿಂದ ತಲೆ ತಗ್ಗಿಸುತ್ತಾಳೆ)

**ನೇ:**—ತಾರೇ ನಮಗೇಕೆ ಪ್ರತ್ಯೇಕ ರಾಜ್ಯವು? ಮಹಾರಾಜರ ಆಳಿಕೆಗೆ ಒಳಗಾಗಿಯೇ ಇರಲಿ ಆ ಪ್ರಾಂತ್ಯವೂ.

**ಸು:**—ತಾರೇ ಬಿಟ್ಟುಕೊಡಬೇಕಲ್ಲವೇ?

**ತಾ:**—ಅಬ್ಬ! ಅದೇಕೋ? ನಾನು ಮರವನ್ನಪ್ಪಿದ ಬಳ್ಳಿಯಲ್ಲವೆ?

**ನೇ:**—ಏನೇ ಆಗಲಿ; ನಾನು ಮಹಾರಾಜರನ್ನು ಬಿಟ್ಟಿರಲಾರೆನು. ಅವರ ರಾಜ್ಯಕ್ಕಿಂತ ಬೇರೆಯಾದ ಒಂದು ರಾಜ್ಯವು ನನಗೆ ಬೇಡ.

**ಸು:**—ಏನು ಹುಚ್ಚು? ನೇತಾಜಿ! ದೀರ್ಘವಿಚಾರಾನಂತರ ಮಹಾರಾಜರೂ ಮಂತ್ರಿಮಂಡಲದವರೂ ಹೀಗೆ ನಿರ್ಣಯಿಸಿದರು- 'ಅಲ್ಲಲ್ಲಿದ್ದ ಅರಸುಮನೆತನಗಳನ್ನು ಬಲಪಡಿಸಿ ಸ್ವರಾಜ್ಯದ ಆಧಾರಸ್ತಂಭಗಳನ್ನಾಗಿ ಮಾಡಬೇಕು' ಎಂದು. ತಾರೆಯೇ ಜಾವಳಿಯ ರಾಣಿಯಾಗಿರಬೇಕೆಂದು ಮಹಾರಾಜರ ನಿಶ್ಚಿತಾಭಿಪ್ರಾಯವು. ಈಗ ಬಾಡಿಹೋದ ಮೋರೆವಂಶದ ಕೀರ್ತಿಲತೆ ಪುನಃ ಹುಲುಸಾಗಿ ಬೆಳೆದು ಹಬ್ಬಲೆಂದೇ ಮಹಾರಾಜರ ಸಂಕಲ್ಪ.

**ನೇ:**—ನನಗೇನೋ ರಾಜ್ಯದ ಆಡಳಿತಕ್ಕಿಂತ ಸ್ವರಾಜ್ಯ ಸೇವೆಯೇ ಮಹತ್ವದ್ದೆಂದು ಹೊಳೆಯುತ್ತದೆ-ತಾರೆ ಬೇಕಾದರೆ ಅಲ್ಲಿಯ ರಾಣಿಯಾಗಲಿ.

**ತಾ:**—ಹೂಂ— ಹೂಂ!— ಅಬಲೆ ಹೊಣೆಗಾರಿಕೆಯನ್ನು ವಹಿಸಬೇಕಲ್ಲವೇ?

**ಸು:**— ಈ ವಿಷಯದಲ್ಲಿ ಮಹಾರಾಜರ ಅಭಿಪ್ರಾಯವನ್ನು ತಿಳಿಸಿದೆ ನಲ್ಲವೇ? ಆ ಪ್ರಾಂತ್ಯದ ಜನರನ್ನು ಸುಧಾರಿಸಿದರೆ ಸ್ವರಾಜ್ಯ ಸೇವೆಯನ್ನೆ ಮಾಡಿದಂತಾಗುವುದು.

**ಹೈ:**—ಮತ್ತೇನು? ನೇತಾ! ಮಹಾರಾಜರ ಆಜ್ಞೆಯನ್ನು ಶಿರಸಾವಹಿಸುವುದು!

**ನೇ:**—ಆಜ್ಞೆಯೆಂದಾದರೆ ನನ್ನದು ಮರುಮಾತಿಲ್ಲ.

**ಸು:**— ಅಲ್ಲದೆ, ಇಂದೆ ಪ್ರಯಾಣಕ್ಕೆ ಅನುವಾಗುವುದು. ಅಲ್ಲಿ ಸಕಲ ಸಿದ್ಧತೆಗಳಾಗುವಂತೆ ಮಹಾರಾಜರು ಸ್ವಜನರನ್ನು ಈ ಮೊದಲೆ ಕಳುಹಿದ್ದಾರೆ.

**ನೇ:**—ಆದರೆ, ನನಗೆ ಮಹಾರಾಜರ ಭೇಟಿ?

**ಸು:**—ಮಹಾರಾಜರೇ ಬರುವರು ಆ ದಿನ. ಅವರ ಸಮ್ಮುಖದಲ್ಲಿಯೇ ನೀವು ಸಿಂಹಾಸನವನ್ನೇರುವುದು.

**ಮಾ:**—ಜಯ ಶಿವಾಜಿ ಮಹಾರಾಜ! ಜಯ ನೇತಾಜಿ ರಾಜ! ಜಯ ಅಂಬಾ ಭವಾನಿ!

**ನೇ:**—ಬಂದ ವಿಪತ್ತುಗಳನ್ನೆಲ್ಲ ಬದಿಗೊತ್ತಿ ಮಹಾರಾಜರ ಉತ್ತಮ ಧ್ಯೇಯಗಳನ್ನು ಲೋಕಕ್ಕೆ ಪ್ರತ್ಯಕ್ಷೀಕರಿಸುವಂತೆ ಸಂದರ್ಭ ವನ್ನೊದಗಿಸಿದ ಜಗದಂಬೆ ಅಂಬಾಭವಾನಿಯನ್ನು ಪ್ರಾರ್ಥಿಸುವ!

